ಹಾರನಹಳ್ಳಿ ಅನಂತರಾಯು. ಎಮ್. ಏ.

ಇವರ

# ಕಾವ್ಯ-ಕಲ್ಪ.





೧೯೨೮.

...ted by Mr. **M. V. Godbole** at his
...nting Press" Karwar and published
..., at Karwar.

# ಕಾವ್ಯಕಲ್ಪ.

॥ ಸಿರಿಗನ್ನಡಂ ಗೆಲ್ಗೆ ॥



೧.

## ಗಣಪತಿ ಸ್ತವನ.

[ ಈ ಕವಿತೆಯು "ವಿದ್ಯಾರ್ಥಿ" ಎಂಬ ಮಾಸಿಕ ಪುಸ್ತಕದಲ್ಲಿ ಪ್ರಕಟವಾಗಿತ್ತು. ಈ ಕವಿತೆಯಲ್ಲಿ ಗಣಪತಿಯ ಸ್ತೋತ್ರವು ವೃದ್ಧಾಚಾರವನ್ನು ಅನುಸರಿಸಿ ಇರುತ್ತದೆ. ಗಣಪತಿಯ ಮೂರ್ತಿಯೆಂದರೆ ಕೇವಲ ವೇದದಲ್ಲಿ ಹೇಳಿದ ಪರಮತತ್ವದ ಮೂರ್ತಿಯೆಂದೇ ಭಾವನೆಯು. ]

ಉದರದೊಳ್ಪದಿನಾಲ್ಕು ಲೋಕಮಂ ಸಲೆಯಿರಿಸಿ ।
ವದನದೊಳ್ಕಿಸುಪೊಂದೆ ದಂತಮಂ ತೋರುತಂ ।
ತ್ರಿದಶವಂದಿತ ಮಂಗಳಾಂಗದೊಳು ಜಂಕಾರಮದು ತಾನೆ
ಮೂಡಿರುತಿರೆ ॥
ಒದವಿರ್ದ ಮಾಯೆಯಿಂ ಮುಸುಕಿರ್ದ ಮನುಜರ್ಗೆ ।
ಹೃದಯಗತವಹುದೆಂದು ವರಪರಮ ತತ್ವವೇ[1] ।
ಪದುಳದೊಳ್ ಮೈಗೊಂಡು ಭವಬಾಧೆಯಂ ಸದೆವ
ವ್ರತಗೊಂಡುದುದು ಭಾಗ್ಯವೈ ॥ ೧ ॥

---

1. ವೇದದಲ್ಲಿ ಪ್ರಣೀತವಾದ ಜ್ಞಾನ.

## ೧. ಗಣಪತಿ ಸ್ತವನ.

ನೊಸಲೊಳೆಸೆದೇಳ್ವ ಬಾವನ್ನದಾ ಗಂಪು ವರ- ।
ರಸಪೂರ್ಣ ತಾಂಬೂಲಮಂ ಮೆದ್ದ ಮೊಗದುಸಿರು ।
ಪಸರಿಸಿದ ತಿಂಗಳೊಳ್ಬೆಳೆದ ಬೆಳ್ದಾವರೆ[2]ಗಳಿಂದೊಪ್ಪುವಾ ಕರಗಳ್ ॥
ಕುಸುಮ ಪರಿಮಳವು ನವವಸನದಾ ಸುರಭಿ ಮೇಣ್ ।
ವಿಶದಾಂಗದಾ ಬೆಮರ ಸೊಗಸು[3] ತೆರೆಮುಸೆಗಿ[4] ಮಿಗೆ !
ಹೊಸೆದ ಕತ್ತಲೆಯ ಜಡೆ ಸಂದಣಿಯು ತೆಕ್ಕೆ[5] ಮನಕಮಿತ
ಭಕ್ತಿಯು ಸಾಪೂರ್ವವು ॥ ೧ ॥

ಭುವನದೊಳ್ಗಣಪತಿಯೆ, ನಿನ್ನನತಿಚಿತ್ರಗೌ- ।
ರವದ ವಿಗ್ರಹದೆ ಪೂಜಿಸುತಿಹರು ಸಂತತಂ ।
ಭವಸಂಕಟಂಗಳಿಂ ಕೊರಗಿ ನಿನ್ನೊಳು ಭಾವಿಸಿದರಲ್ತೆ
ವಿಘ್ನಾಂತಕಮಂ ॥
ಕವಲವಿಲ್ಲದೆ ಮನದೆ[6] ನಿನ್ನ ಸೇವಿಸುವ ಮಾ- ।
ನವರಿಂಗೆ ಧೈರ್ಯ-ಸಾಹಸ-ಶಕ್ತಿ ಗುಣಗಳಂ ।
ಜವದಿಂದ ಪೂರೈಸಿ ಕೆಲಸಮಂಗೆಲಿಸಲ್ಕೆ ಶುಭಕಾರಿ
ಹೇರಂಬನೇ ॥ ೨ ॥

---

2. ಬೆಳದಿಂಗಳಲ್ಲಿ ಬೆಳೆದ ಬಿಳಿಯುದಾವರೆಗಳು ದೇವರ ಕೈಯಲ್ಲಿರಲು ಅತಿಶಯ ಯೋಗ್ಯವಲ್ಲವೇ? 3. ಪುಣ್ಯವಂತರ ಬೆವರೇ ಸುವಾಸಯುಕ್ತವಿರುವುದೆಂಬ ಪ್ರವಾದವಿದ್ದ ಮೇಲೆ ದೇವರ ಬೆವರಾದರೂ ಅದಕ್ಕೂ ಹೆಚ್ಚು ಸುವಾಸಿಕವಿರುವುದು ಶಕ್ಯವಿರುವುದಲ್ಲವೇ? 4. ವಿಶೇಷವಾಗಿ. 5. ದಟ್ಟವಾಗಿದ್ದ ಕತ್ತಲನ್ನ ಕೂದಲದ ಸಮೂಹದ ಕೂಡ. 6. ಏಕಚಿತ್ತದಿಂದ.



೨.

# ಕೋಗಿಲೆ.

[ ಇದಾದರೂ "ವಿದ್ಯಾರ್ಥಿ" ಯಲ್ಲಿಯೇ ಪ್ರಕಟವಾಗಿತ್ತು. ಕೋಗಿಲೆಯು ಸ್ವರವನ್ನು ಮನಸ್ಸುಗೊಟ್ಟು ಕೇಳಿದವನಿಗೆ ಆನಂದವಾಗದೇ ಎಂದೂ ಇರದು. ಕೋಗಿಲೆಯು ಸ್ವರದಿಂದ ಮನಸ್ಸಿನಲ್ಲಿ ಹುಟ್ಟಿದ ನಾನಾ ಕಲ್ಪನೆಗಳನ್ನು ಈ ಕವಿತೆಯಲ್ಲಿ ನಾನು ವರ್ಣಿಸಿರುವೆನು; ಇನ್ನು ವರೆಗೂ ಹೀಗೆಯೇ ನನಗೆ ಕಲ್ಪನೆಗಳು ಬರುವುವು. ಕೋಗಿಲೆಯು ಗಾನದಲ್ಲಿ ಲೋಲನಾದ ಕಾಲದಲ್ಲಿ ಹೊರಟ ಈ ಉದ್ಗಾರಗಳನ್ನೆಲ್ಲ ನಾನು ಕೋಗಿಲೆಯು ಉದ್ಗಾರವೆಂದೇ ತಿಳಿದುಕೊಂಡಿರುವೆನು. ಈ ಕವಿತೆಯನ್ನು ಮಂಜುಭಾಷಿಣಿ ವೃತ್ತದಲ್ಲಿ ಬರೆದಿದೆ. ]

ಚೆಲುವಾದ ರಾಣಿಯುಷೆ ಬರ್ಪ ಕಾಲಮಂ ।
ಕಲಗಾನದಿಂದುಲಿವ ಬಂದಿಯೆಂಬವೊಲ್ ॥
ನಲುವಿಂದೆ ನಿನ್ನ ದನಿಕೂಡಿ ಕೋಗಿಲೆ ।
ಸುಳಿವಂ ಸಮೀರ ನಿಳೆಯುಂ ಪ್ರಭಾತದೊಳ್[1] ॥ ೧ ॥
ಅರುಣಂ ದಿನೋದಯುದಿ ಶೋಭಿಪಂ ವಲಂ ।
ಮರುತಂ ಸದಾ ಸೊಗಮನೈದಿಪಂ ಕರಂ ॥
ಧರೆ ಪುಷ್ಪಗಂಧವನು ತಾಳ್ದು ರಂಜಿಪಳ್ ।
ತುರುಗಿಪ್ಪ ನಿನ್ನ ಮೃದುಗಾನದಿಂ ಸಖೀ ॥ ೨ ॥
ಗಗನಾಂಗಣಂ ಘನ ನಿನಾದ ಭೀಕರಂ ।
ನೆಗೆದುಗ್ಗಿ ಭೋರ್ಗರೆವ ಸಿಂಧು ಭೀಕರಂ ॥
ಹಗುರಾಗಿ ಬೀರೆ ಪವಮಾನ ನಿನ್ನಯಾ ।
ಸೊಗಯಿಪ್ಪ ನುಣ್ಚರವ ಭೂಮಿ ರಮ್ಯಳು ॥ ೩ ॥

1. ಉಷೆಗೆ ಭಟ್ಟಂಗಿಯಾಗಿ ಮುಂಜಾವಿನ ತಂಗಾಳಿಯು ಕೋಗಿಲೆಯ ಧ್ವನಿಯು ಮುಖಾಂತರವಾಗಿ ಅವಳನ್ನು ಹೊಗಳುವನು, ಎಂಬುದೇ ಇದರ ಭಾವವು.

ಅಜವಾಣಿಯರ್ ಸುರರಿಗೀವ ಗಾಡಿಯಂ[2] ।
ನಿಜವಾಣಿಯಿಂ ಬಗೆವ ಗಾನಲೋಲಳೇ ॥
ಭಜಿಸುತ್ತೆ ನಿನ್ನದಱಿಯಂ ನರೋತ್ತಮರ್ ।
ಸೃಜಿಪರ್ ವಿಲಾಸಕೃತಿಯಂ ವಿನೋದಿಪರ್ ॥ ೪ ॥

ವಿರಹಾರ್ತನೀಕ್ಷಿಪನು ತನ್ನ ನಲ್ಲಳಂ ।
ಸರಮಂ[3] ವಿಹಾರವಿಧಿಯಂ ವಿಲೋಕಿಪಂ ॥
ವಿರತಂ[4] ಜಗದ್ಗುಣವಗಾಣ್ಬಪಂ ನಿಜಂ ।
ಪರಪುಟ್ಟಳೋತುಲಿವ ನುಣ್ಚರಂಗಳೊಳ್ ॥ ೫ ॥

ಎಳೆನೇಸಱೇಱುತೆ ದಿಗಂತ ಭೂಮಿಯಂ ।
ಕಳೆಯ್ಯೆದಿಸೀಯೆ ಪೊಸ ಪೊಚ್ಚ ಸೀರೆಯಂ ॥
ತಳೆದಂದ ವನ್ನವಳೆ ಬಣ್ಣ ಪಂತೆವೋಲ್ ।
ಬಳೆದಿರ್ಪುದೈ ಗೆಳತಿ ನಿನ್ನ ವಾಣಿಯು[5] ॥ ೬ ॥

ಸಿರಿಯುಳ್ಳರಾಱಮಿಪ ತೋಂಟ ಮೆತ್ತಣಂ ।
ಧರೆಯಾಣ್ಮರೂರಿದ ಬನಂ ಸಮೀಪದೊಳ್ ॥
ಮೆಱೆದಪ್ಪುದೇನಿಹುದೆ ಭೋಗಭೂಮಿಯುಂ ।
ಪರಪುಟ್ಟಳೇಕುಲಿವಳಿಂತು ಚೆಂದದಿಂ ॥ ೭ ॥

ಕೊನರ್ದ*ಂದವೂದ ಬನಸಾಲ್ಮರಂಗಳಂ ।
ತನಿವಣ್ಣಳುಳ್ಳ ತರುಗುಲ್ಮಮಂ ಸಮೀ- ॥

---

2. ವಿನೋದ ವಿಲಾಸಾದಿಯು. 3. ಹೆಂಡತಿಯನ್ನು ಕೂಡಿಕೊಂಡಿದ್ದವನು. 4. ವಿರಕ್ತ. 5. ಹೊಸ ಉತ್ಸಾಹ ಹೊಸ ಸೀರೆಯಿಂದ ಆನಂದಬಟ್ಟ ಭೂಮಿಯು ತನ್ನ ತರಹವನ್ನು ಹೊಗಳುವಂತೆ ಕೋಗಿಲೆಯು ಕೂಗಿತು.

ರನ ಕಾಲ್ಗೆಡಿಪ್ಪಲರ್ದ[*] ಬಳ್ಳಿವಳ್ಳಿಯುಂ ।
ಘನವರ್ಣೆ ನಿನ್ನದನಿ ತೋರ್ಪುದೆತ್ತಲುಂ ॥ ೮ ॥
ನನೆವಿಲ್ಲಕೈವನೆ[6] ವೊಲಿರ್ಪ ನೀರಜೋ-
ದ್ವನಮುಂ ವನೇಶ್ವರಿಯ ಹಾಸು ಗನ್ನಡೆಂ- ॥
ದೆನುವಂತೆ ರಂಜಿಪ ವಿಹಾರಕೂಪಮುಂ ।
ಘನವರ್ಣೆ ನಿನ್ನ ದನಿ ತೋರ್ಪುದೆತ್ತಲುಂ ॥ ೯ ॥
ಇನಿಯೋಪರಕ್ಕರದ ಸೊಲ್ಲು ಸೊಲ್ಲಿಗುಂ ।
ತೊನೆವಂತೆ ತೀಡೆಸೆವ ಮಂಡಪಂಗಳಂ ॥
ಮನಸೋಲ್ದ ಕಾಮಿಗರೆಯಲ್ತ ವೆಣ್ಗಳಂ[7] ।
ಘನವರ್ಣೆ ನಿನ್ನ ದನಿ ತೋರ್ಪುದೆತ್ತಲುಂ ॥ ೧೦ ॥
ಬನರಾಣಿ ತೊಟ್ಟ ಸಕದಂತೆ ನಾದಮುಂ ।
ಜಿನಗುತ್ತೆ ವಾರುವರವಕ್ಕಿ ಹಿಂಡಿನಿಂ ॥
ಬಿನದಂ ನಿಮಿರ್ಚೆ ಅವಳೆಂದ ಗಾನಮಂ ।
ಘನವರ್ಣೆ, ನಿನ್ನ ದನಿ ತೋರ್ಪು ದೆತ್ತಲುಂ[8] ॥ ೧೧ ॥
ಕನಕಾಭೆಯುಂ ಪಡೆದ ಜಾವದೊಳ್ಕೊಳಂ ।
ಮಿನಗುತ್ತಮಿರ್ಪ ಜಳವಕ್ಕಿ ಸಾಲ್ಗಳಾ ॥

---

6. ಕಾಮನ ಬತ್ತಳಿಕೆ. 7. ವಿರಹದಿಂದ ಮತ್ತನಾದವನಿಗೆ ಉದ್ಯಾನದಲ್ಲಿರುವ ಕಲ್ಲಿನ ಹೆಣ್ಬೊಂಬೆಗಳು ಕೂಡ ಸಜೀವವಾದ ಹೆಣ್ಣುಗಳಂತೆ ತೋರುವುವು. 8. ಕೋಗಿಲೆಯು ಆನಂದವು ಭೂಮಿಗಿಟ್ಟ ಆಭರಣದ ಸಪ್ಪುಗಳಂತಿದ್ದ ಅರವಕ್ಕಿಯ ಧ್ವನಿಯಿಂದ ಉಂಟಾಗಿರಬಹುದು.

ಗೂನೆಮುತ್ತಿನಾಂತ ಕಟಿಸೂತ್ರಮೆಂಬುದಂ ।
ಘನವರ್ಣೆ ನಿನ್ನ ದನಿ ತೋರ್ಪುದೆತ್ತಲುಂ[9] ॥ ೧೨ ॥
ಬರಿದಾಯ್ತು ಭೋಗಮುದು ರಮ್ಯಭೂಮಿಯುಂ ।
ಬರದಾಯ್ತು ಕಾಮಿಜನಚಿತ್ತ ಕುತ್ಸನಂ ॥
ಕಿರಿದಾಯ್ತು ರಂಜನದ ಪಾಂಗುವೆತ್ತಲಿಂ ।
ನ್ನಿರದಾಯ್ತು ನಿನ್ನ ರವ ಕೆಂತುಟುಂ ಬಿಲೆ ॥ ೧೩ ॥

9. ಭೂದೇವಿಯು ಡಾಬಿನಂತಿರುವ ಕೊಳದ ಸುತ್ತಲೂ ಇರುವ ನೀರ ಹಕ್ಕಿಗಳು ಡಾಬಿನ ಮುತ್ತಿನ ಗೊಂಚಲದಂತೆ ಕಂಡುವು.



## ದ್ವೇಷಭಾಂಡಾರ ನಾಟಕದೊಳಗಿನ ಪದ.

ರಾಗ ಭೂಪ. “ ನಮನ ತೇ ಶರಣ ” ಎಂಬಂತೆ.

॥ ಶ್ರೀ ॥ ನಮಿಪೆ ಸಿರಿ ವಡನೆ ತವ ಚರಣ ವಾರಿಜಗಳಿಗೆ ।
ಕ್ಷೇಮಧಾಮನೆ, ಸಮಾಧಾನದಾಶಾ ॥ ಪ ॥
ಆದಿಮಧ್ಯಾಂತಾದಿ ರಹಿತ ನಿತ್ಯಾರ್ಭಕ ।
ವೇದಗೋಚರ ರೂಪ ಶಾಂತ ಚರಿತೆ ॥ ೧ ॥
ಲೋಕದಹಂಮತಾ ವಾಪ್ತಪಾಪಂಗಳ ।
ಸೋಂಕಸಿಂ ತೊಳೆವುತಾರಯಿಸು ತಾತಾ ॥ ೨ ॥



## ೩.

# ಶೋಕ ಗೀತೆ.

ಈ ಕೃತಿಯು ಮೊದಲು "ಪ್ರಭಾತ" ವೆಂಬ ಕಾವ್ಯ ಮಾಸಿಕ ಪುಸ್ತಕದಲ್ಲಿ ಪ್ರಸಿದ್ಧವಾಗಿತ್ತು. ಮೊದಲನೆಯ ಬಾರಿ ಇನ್‌ಫ್ಲೂಯೆಂಝಾ ಬೇನೆಯು ಬಂದಾಗ ಸಣ್ಣ ಕೂಸುಗಳೂ ಹರೆಯ ಹೆಣ್ಣು ಮಕ್ಕಳೂ ಬಹು ಪ್ರಮಾಣದಿಂದ ಸಾಯಲಾಗಿ ಮನಸ್ಸಿಗೆ ಸಂತಾಪವಾಗಿ ಈ ಉದ್ಗಾರಗಳು ಹೊರಟುವು. ಈ ಕವಿತೆಯಲ್ಲಿ ಮೂರು ಭಾಗಗಳನ್ನು ಮಾಡಬಹುದು. ಮೊದಲನೆಯದರಲ್ಲಿ ಸಾವಿನ ಕಾರಣಗಳನ್ನೂ ಎರಡನೆಯದರಲ್ಲಿ ಸತ್ತವರಿಗೆ ಯಮನು ಹೇಗೆ ಆದರಸತ್ಕಾರ ಮಾಡಬೇಕೆಂಬುದನ್ನೂ ಕೊನೆಯ ಭಾಗದಲ್ಲಿ ಸತ್ತವರು ಇದ್ದವರ ಬಗ್ಗೆ ಮಾಡಿದ ಸತ್ಕಾರ್ಯಗಳನ್ನು ವರ್ಣಿಸಿರುವೆನು. ಮೊದಲನೆಯ ಭಾಗವು ತರ್ಕಬದ್ಧವಾಗಿದೆ; ಎರಡನೆಯದು ಕಾರುಣ್ಯಮಯವಾಗಿದೆ; ಕಡೆಯದು ಆನಂದಜನಕವಿರುತ್ತದೆ. ಕೊನೆಯ ಎರಡೂ ಭಾಗಗಳು ನಿಜವಾಗಿ ಮನೋಹರವಾಗಿವೆಯೆಂದು ನನಗೆ ತೋರುತ್ತದೆ. ]

ಯಮದೂತರ ಸೇನೆಯೊಳು ।
ಪ್ರಮುಖನು ತಾನೆನಿಸಿದೋರ್ವ ಮಾರನು[1] ಜಗದಿಂ ॥
ಶ್ರಮವಿಲ್ಲದೆ ಮಿತಿಯಿಲ್ಲದೆ ।
ಯಮಸದನಕ್ಕೆಳೆವನೆಂತೊ ನರರನ್ನಕಟಾ !! ॥ ೧ ॥
ನಾನಾರೂಪವ ತಳೆದಾ ।
ಸೇನಾನಿಯು[1] ಜನಸಮೂಹದೊಳ್ ಕಾದುತಿರಲ್ ॥
ತಾನಾಗಿ ಬಿಡುತನೇಕರ ।
ನೇನೋಯಿಸಿಪನಹಹ[2] ! ಸಕಲರನರಿದೆಸಿಬರನೊ ॥ ೨ ॥

---

1. ಪಿಡುಗು; ಇಲ್ಲಿ ಇನ್‌ಫ್ಲೂಎಂಝಾ ಬೇನೆಯೆಂದು ತಿಳಿಯಬೇಕು.

ಮಡಿದವರಂ ನೆನೆವಂತ್ರಹೆ. ।
ರಿಡೆ[2] ಬಳಲ್ವರ್ ತಮ್ಮ ಹಿತವು ನಿಂದುದಕೆಂಬಾ ॥
ನುಡಿಯಿಂ ಪ್ರೌಢರು ಗಳುಹುವ ।
ಬಡಿವಾರವನವರು ಪೊಳ್ಳಿತೆಂಬರೆ ಪೇಳೆಂ ॥ ೩ ॥
ಜಗದಂತರಂಗವನರಿಪ ।
ನಿಗಮವೆನಿಪ[3] ಕವಿ ಬಳಲ್ದು ಬೆಂಡಾಗುತಿರಲ್ ॥
ಬಗೆಗೆಟ್ಟ ಲೌಕಿಕಜ್ಞರು ।
ನಗುವರೊ ಮೇಣ್ ಭಯವ ಬಡುತ ಕಲ್ಲಾಗುವರೊ ॥ ೪ ॥
ಧರೆಯೊಳ್ ಪೆತ್ತಿಹ ಜನ್ಮದ ॥
ಕುಡುಹುವಿದೆಂಬಂತೆ ಪೊಳ್ಳೆವಿನಿತಿನಿತೆನುವಾ ॥
ನರರೆಲ್ಲರಸುವ ಪೀರುವ ।
ದುರಂತಕನಿಗೇಂ[4] ಕೊಡುವುದೆ? ಧರ್ಮನ ಪೆಸರಂ ॥ ೫ ॥
ಬೊಮ್ಮನು ಪುಟ್ಟಿಪನೇತಕೆ? ।
ಸುಮ್ಮನೆ ಹರಿ ಬೆಳಿಪನೇಕೆ? ಚಿತ್ತಂಗಡುತಂ ॥
ಕೆಮ್ಮನೆ[5] ಶಿವನಾಗಾರದ ।
ದುಮ್ಮನ[6]ರಪ್ಪಾಳು ಮಕ್ಕಳಿಮ್ಮನು ಕೊಲುವರ್ ॥ ೬ ॥
ಅಲ್ಲಲ್ಲವು ಈ ನಿಂದೆಯು ।
ಸಲ್ಲದಿದುವಜಾಂಡನಾಳ್ವ ಸುರವರಂಗೆಲ್ಲೈ! ॥
ಬಲ್ಲವರಾದೊಡೆ ನಮ್ಮೊಳೆ ।
ನಿಲ್ಲಿಸುವಾ, ನರರೆ, ನಮ್ಮ ಸಾವಿನ ಕತಮಂ[7] ॥ ೭ ॥

---

2. ವಿಶೇಷವಾಗಿ. 3. ಜಗತ್ತಿನ ಗುಟ್ಟನ್ನು ತಿಳಿದು ನಿಶ್ಚಿತ ವಾಣಿಯಿಂದ ನುಡಿಯುವವನು. 4. ದುಷ್ಟ ಯಮನು. 5. ನಿರರ್ಥಕವಾಗಿ. 6. ದುಷ್ಟರಾದ. 7. ಕಾರಣವನ್ನು.

ಧರ್ಮದ ಗುಣ ದೋಷಗಳ‌ । 
ನ್ನೊರ್ಮೆಯು ಪರಿಕಿಸದೆ ನೀಚರಾಗಿರ್ಪರ್ಗಳ್ ॥
ಕರ್ಮವು ಕೆಡುತೆ ಬಲಿದು ಶಾಂ ।
ಕೂರ್ಮೆಯೊಳಿಂತೀವುದೆಂದು ಸಜ್ಜನರು ನುಡಿವರ್ ॥ ೮ ॥
ಸಿರಿಯಾಸೆಯು ಸುಖದಾಸೆಯು ।
ನೆರೆಯಿಸಿ ಲೋಕವನು ಬಿಜಯಗೈವುವು ಯಮನಂ ॥
ಮರುಳ್ಗೆ ಜನವಿದು ಸತ್ಯಂ ।
ನಿರುತಂ ಕರುಣಾಳುವಿಂತು ಕೂಗುವನಲ್ತೇ ॥ ೯ ॥
ಬದುಕಿದ ಮಾನಿಸರೊಳಿತ ।
ನ್ನೊದವಿಪ ಬಗೆ, ಗತವ ತಿಳಿಯೆ, ಕಾಣ್ಗುಂ ಸತ್ಯಂ ॥
ನಿಧನಂ ನುಂಗಿದ ಜೀವಿಗ ।
ಳಧಮತೆಯಿಂ ಬೇಡಬಹುದೆ? ನಮ್ಮುನ್ನತಿಯಂ ॥ ೧೦ ॥
ಗಾಳಿಯೊಳುರಿಯುದಯಿಸೆ[8] ಮೇಣ್!
ಬಾಳುವೆಚೀಲವನು[9] ಕಫವು ಬದಿಯಿಂ ಬಳಿಸಲ್ ॥
ತಾಳದೆ ತೊಳಲುವ ರೋಗಿಯ ।
ಗೋಳಿನ ನೆರಳಿಕೆಯು ಯಮನ ಕಹಳೆಯ ಕೂಗೇ ॥ ೧೧ ॥
ಪುಟ್ಟುವುದುಳಿವುದು ಯುಳಿವುದು ।
ನೆಟ್ಟನೆ ನಿನ್ನಾಟವಿನ್ನು ಮರ್ತ್ಯರಧೀನರ್ ॥
ತೊಟ್ಟನೆ ನೀನುಳಿದವರಂ ।
ನಿಟ್ಟಿಪನಹನಾಗೆ ಸಾಯಲಟ್ಟುಳಿಯುಂಟೇಂ? ॥ ೧೨ ॥
ಪಸುಳೆಯ ಪಾಸು ಜರೆಯ ಮೊರೆ ।

---

8. ವಾತಜ್ವರ, ಇನ್‌ಫ್ಲೂಎಂಝಾ ಬೇನೆಯು ವಾತಜ್ವರದಿಂದ ಹುಟ್ಟುವುದೆಂಬ ಮತದ ಅನುವಾದವು. 9. ಹೃದಯವನ್ನು.

ಪೊಸ ಜವ್ವನ-ಜಾಲಗಳನು ಬೇಳ್ದೆವು[10] ದೇವಾ! ॥
ದೇಸಿಗ[11]ರಾವಾದೊಡೆಯುಂ ।
ಆಸಿಪೆವೈ ಬಂದವರನು ಕಾಯುವಿಯೆಂದೇ । ೧೩ ॥
ನಿನ್ನಯ ಮನೆ ಹಾದಿಯ ಕಡು ।
ಬನ್ನಕೆ ಸೀನಿವರನೀಡುಮಾಡಲು ಬೇಡಾ ॥
ಮನ್ನಿಸಿ ನಿನ್ನಾಣೆಯ ನಿವ- ।
ರುನ್ನತರೈ ಬಂದರೆಡಹಿ ತಮ್ಮುಮ್ಮಜ್ಜಗಮಂ ॥ ೧೪ ॥
ಯಮುನಾಗಾರದ ಯಾತನೆ ।
ಸಮನಿಸಲ್ಕೆ ಶೀತಲೋಪಚಾರದ ಬಗೆಯಿಂ ॥
ಸುಮನಸರಿವರು ಸಾಂಸಾರಿಕ ।
ಯಮಯಾತನೆಯಲ್ಲಿ ಬೆಂದರಲ್ಲವೆ ದೇವಾ! ॥ ೧೫ ॥
ಖಚರರ್ ಪಾಡಲಿ ಕುಣಿಯಲಿ ।
ಸುಚರಿತ್ರರಯ್ದುವರು ನಿನ್ನ ಮನೆ ಬಾಗಿಲುಮಂ ॥
ಪ್ರಚಲಿತಯಾಚನಶೋಚನ ।
ನಿಚಯದಿ ತಾವಾತ್ಮಘಾತಕೆಳಸದ ಸುಜನರ್ ॥ ೧೬ ॥
ನಿನ್ನಾಲಯದೊಳ್ ಕೂಡಿದ ।
ಸನ್ನುತರೊಳ್ ನೆಲೆಸಿ ನೀಡು ಸಗ್ಗದ ಸೊಗಮಂ ॥
ಮುನ್ನಮೆ ಗತ-ತೇಜರ್ ಮ- ।
ತ್ತನ್ನಿಯದಿಂ ಕರ್ಮಭೂಮಿಗೆರವಾದರಿವರ್ ॥ ೧೭ ॥
ಬಿಱಿಯಲಿ ಸತ್ತುಂ ಚಿತ್ತುಂ ।
ನೆಱೆಯಲಿಯಾನಂದವಂತು ಪೆರ್ಚಲಿ ನಿತ್ಯಂ ॥

---

10. ಕೂಸುಗಳನ್ನೂ ಮುಪ್ಪಿನ ಹಾಗು ಪ್ರಾಯದ ಹೆಣ್ಣುಮಕ್ಕಳನ್ನೂ ಜಪಾಕೆ ಕೊಟ್ಟೆವು. 11. ಅನಾಥರು.

ಜರಿಯದ ಮಾಯೆಯು ನೀಗಿದ ।
ಶರಣರಿಗಿನಿತೊಂದು ದೊರೆವುದೇನಚ್ಚರಿಯೈ ? ॥ ೧೮ ॥

ಮಗುಳೆ ಜನಿಸರಿವರಿಲ್ಲಿಯುಂ ।
ಜಗದಘಸಂಜಾತಮಾರಶೋಧಿತಜೀವರ್ ॥
*ನೆಗಳ್ವರಿಮಗೆ ಸುಖಶಾಂತಿಯು ।
ಮುಗಿಲಲ್ಲಿರಿಯೆ ಸುೞಿದು ದಿವ್ಯರೂಪ ಸಮೇತರ್ ॥ ೧೯ ॥

ಮೂರುಂ ತಾಪಕ್ಕನುವೆಂ ।
ದಾರುತ್ತಿಹ ಜನ್ಮದಿಂದೆ ಪಾರಾಗಿರ್ಪರ್ ।
ಧೀರೋನ್ನತರಂ ದೂಱುತೆ ।
ಭೋರಾಡದೆ ನೊಳ್ಪುದವರ ಸತ್ಕಾರ್ಯಗಳಂ ॥ ೨೦ ॥

ಹೊತ್ತಿದ ವೈ[12]ರವು ಮುಗ್ಗಿತು ।
ತೆತ್ತಿದರ್ಕೆ ತಮ್ಮ ತಪ್ಪಿಗೆಲ್ಲವನಹಿತರ್ ॥
ಬಿತ್ತರಿಸಿತು ದಿಟದಾಳಿಕೆ ।
ಯೆತ್ತಲು ಪಿರಿದತ್ತು ಶಾಂತತಾಗಮಸಮಯಂ ॥ ೨೧ ॥

ಬಿತ್ತಿಗೆ ಬೆಳೆದಿತು ಮರಗಳ್ ।
ಪೆತ್ತುವು ತನಿವಣ್ಣಳನ್ನು ಬತ್ತಿದ ಸೆಲೆಗಳ್ ॥
ಪುತ್ತುವೊಸೆದುವು ಪಳವುಂ ।
ಸುತ್ತಲು ಪಸಿರಾಗೆ ಬೀಗಿದುವವು ಮೃಗಖಗಗಳ್ ॥ ೨೨ ॥

ಈ ತೋರಣ ಮೀಬಾಜ[13]ನ ।
ಮೀ ತೋ[14]ರುಡೆಯುಂ ಸುಗಂಧ ಮಾಲ್ಯಾದಿಗಳುಂ ॥

---

12. ಕಳೆದ ಮಹಾಯುದ್ಧವು. (೧೯೧೪) 13. ವಾದನ.
14. ಉತ್ತಮವಾದ ವಸ್ತ್ರ.

ಈ ತಾಳ್ಮೆಯುಮೀಯಕ್ಕರು- ।
ಮೇತಕ್ಕೆಮಗೆಂಬ ಚಿತೆಯುಂ[15] ತೆಮರ್ದುದು ಸಟೆಯೇ? ॥ ೨೩ ॥
ಭೂಮಿಯ ಮೋಹನ ತೊರೆದು- ।
ವ್ಯೋಮದಿ ಸಂಚಾರಮಾಳ್ಪ ಭಾಸುರಸತ್ವರ್ ॥
ಕಾಮಿತವನಿಂತು ಸುರಿಸುತೆ ।
ಪಾಮರರಂ ಪೊರೆವ ಪದಕೆ ಪೊತ್ತಿಹವಲ್ತೇ ? ॥ ೨೪ ॥
ಸಡೆಯುತೆ ಸದ್ಭಾವನೆಯ- ।
ನ್ನೊಡರಿಸೆ ಸದ್ಬುದ್ಧಿಯಿಂದೆ ಕರ್ತವ್ಯಗಳಂ ॥
ಮುಡಿದಾ ಬಾಂಧವರನೊಡಂ- ।
ಬಡಿಸುತೆ ಜಗದೀಶ ನೋವನನಿಶಂ ನಮ್ಮಂ[16] ॥ ೨೫ ॥



## ದ್ವೇಷಭಾಂಡಾರ ನಾಟಕದೊಳಗಿನ ಪದ.

**ರಾಗಃ ಭೈರವಿ ಗಜಲ್. “ ರಾಮಪ್ಯಾರಾ ಹೈ ಹಮಾರಾ ” ಎಂಬಂತೆ.**

ದೇಶಮಾತೇ ಹೇ ಪುನೀತೆ, ದೇವ ಮುನಿಮಾತೇ । ಸ್ವಮಾತೆ ।
ಜ್ಞಾನ ಪೂತೇ ಧರ್ಮಖ್ಯಾತೆ ಧಾನ್ಯಧನಭರಿತೇ । ಸ್ವಮಾತೆ ॥ ಪ ॥
ರಾಜದಾಸ ದೇವದಾಸ ಸ್ವರ್ಗವಾಸಾ ss । ಪಶೇಷ ।
ಭೋಗತೋಷ ಮಾನಭೂಷ ಕೀರ್ತಿವೇಷಾ ss । ನಿಷೇಷ ॥ ೧ ॥
ದೇಶಸೇವೆ ಮಾತೃಸೇವೆ ದೇವ ದೇವೇ ss । ಶಸೇವೇ ।
ದೇಹಜೀವೇತ್ಯಾದಿ ಶಾವೇ ಪಾವನಂದಳಿವೇ । ಕಸೇವೆ ॥ ೨ ॥

---

15. ವ್ಯಥೆಯು. 16. ಕರ್ತವ್ಯವನ್ನು ಮಾಡುವುದೇ ಯಾವಾಗಲೂ ಶ್ರೇಯಸ್ಕರವಾದ ಮಾರ್ಗವು.

೪.

# ಝಾರನ ಭಾವಚಿತ್ರವನ್ನುದ್ದೇಶಿಸಿ.

[ ರಶಿಯಾ ದೇಶದ ಚಕ್ರವರ್ತಿಯಾದ ಝಾರನನ್ನು ಅವನ ಪ್ರಜೆಯು ತಳ್ಳಿ ಅವನನ್ನು ಒಂದು ಕಾರಾಗೃಹದಲ್ಲಿಟ್ಟಾಗ ಅವನು ಅಲ್ಲಿದ್ದ ಒಂದು ಬಡ್ಡೆಯ ಮೇಲೆ ಕುಳಿತು ಚಿಂತೆಯಲ್ಲಿ ಬಿದ್ದ ಹಾಗೆ ತೋರಿಸುವ ಒಂದು ಚಿತ್ರವನ್ನು ಯಾವುದೋ ಒಂದು ಇಂಗ್ಲೀಷ ಮಾಸಿಕ ಪುಸ್ತಕದಲ್ಲಿ ನಾನು ನೋಡಿದೆನು. ಚಿತ್ರದಲ್ಲಿ ಆ ದೀನ ಮೂರ್ತಿಯನ್ನು ನೋಡಿ ಅತಿಶಯ ದುಃಖವಾಗಿ ಈ ಕವಿತೆಯನ್ನು ಬರೆಯುವುದಾಯಿತು. ತನ್ನ ಗಂಡನಾದ ಝಾರನನ್ನು ಪೃಥಿವಿಯು ಹೇಗೆ ಸಮಾಧಾನ ಮಾಡಬೇಕು ಮತ್ತು ಅವಳು ಹೇಗೆ ಮಾಡಿದಳು ಎಂಬ ವಿಷಯಗಳನ್ನು ವರ್ಣಿಸುವ ಭಾಗಗಳು ಈ ಕವಿತೆಯಲ್ಲಿ ಹೃದಯಂಗಮವಾಗಿವೆ. ಈ ಕೃತಿಯು ತರಳ ವೃತ್ತದಲ್ಲಿದೆ. ]

ಗಣನೆಪೊಂದಿದ ರಾಜಮಾಲೆಯೊಳಾಂತು ಕೀರ್ತಿಯ ನಾಮಗಂ ॥
ಚಣದೊಳಾದನೆ ಝಾರ ಕೀಳನು ತನ್ನ ದೇಶದವರ್ಗೆಯೇ ॥
ಸೆಣಸಿದ ಸ್ವಜನರ್ಗೆ ಶಾಂತತೆ ತಾರದಾದನೆ ಭೂಪನೇಂ ।
ಕಣೆಯುದಿರ್ದ ನರಾಧಮರ್ಗೆ ವಿಲಾಸವಾದನೆ ಮೇಣವಂ ॥ ೧ ॥

ಜಲಧಿಯೊಳ್ಸಿಗದಾಯ್ತೆರನ್ನವು ತಾರೆ ಕತ್ತಲೆಬಾನೊಳೇಂ ।
ನೆಲದೊಳಂ ಸಿಗದಾಯ್ತೆ ಹೊನ್ನದು ಅಂತರಿಕ್ಷವಿ ಮೇಘ ತಾಂ ॥
ಅಲರಸೀಕ್ಷಿಸದಾಯ್ತೆ ನಂದನದೊಳ್ಕುಪರ್ದಿ ಕುಬೇರನೊಳ್ ।
ನೆಲೆಸದಾಯ್ತೆ ನರೇಶಗೊಪ್ಪುವ ಸದ್ಗುಣಂ ಬಡ ಝಾರನೊಳ್ ॥ ೨ ॥

ಇಳಿದುದೇ ಹಣೆಮೇಲುಮೇರೆಯು ಪೋದುದೇ ಸಿರಿ ಕಣ್ಗಳಿಂ ।
ಸೆಳೆದುಕೊಂಡುವೆ ದೀರ್ಘಬಾಹುಗಳೇಂ ಧರಾಧಿಪ ರೇಖೆಗಳ್ ॥
ಉಳಿಸಿ ನಿಂತವೆ ಪರ್ಜಿದೆರ್ದೆ ಕುಮಾಂಗಕೇ ಸಮೆದ್ಬೈದುದೇ ।
ಕೆಳದಿಯ್ಬೈದೆಲೆ ಏಕೆ ಸತ್ಪ್ರಜೆ ಕೊಂದುದೋ ಬಡ ಝಾರನಂ ॥ ೩ ॥

---

1. ರಾಜಚಿಹ್ನವಾದ ಹರವಾದ ಎದೆಯು ಸುಡುದಿಕೊಂಡಿತೇ.

## ೧೪. ಝಾರನ ಭಾವಚಿತ್ರವನ್ನುದ್ದೇಶಿಸಿ.

ನೆರೆಸಿ ದೇಶವ ತುಂಬಿಕೋಶವನೂರಿಸನ್ನುತ ನೀತಿಯುಂ ।
ತರಿದು ವೈರಿಯ ಕೂಡಿ ಮಿತ್ರರನೋವುತಂ ತಮನಾಡನ- ॥
ಕ್ಕರತೆಯಿಂ ಜನಕೆಲ್ಲ ವಿದ್ದೆಯ ಪೇಳಿಬಲ್ಲಿದರಂನೆ[2]ಗ- ।
ಳ್ಟರಸರಾ ಮನೆಯಲ್ಲಿ ಪುಟ್ಟಿದ ಸೀತನುಂ ಸುವಿನೀತನು ॥ ೪ ॥
ಉದಕಮಂ ಪಳಿವಂತೆ ಮೀನ್ಗಳು ಬಿಟ್ಟು ಝಾರನ ಓರಿಯುಂ ।
ಸದೆದುದಕ್ಕೃವನನ್ನು ಸರ್ವರು ಗೆಲ್ವರೇ ನೃಪಭಾವಮಂ ॥
ಪಡುಪದದಾದರು ಸಿಕ್ಕು ಧನ್ಯತೆವೆತ್ತರೇ ಮತಿಗೆಟ್ಟವರ್ ।
ಒದವಿದಾಸೆ[3]ಲೆಯಿಕ್ಕೆ ಬಾವಿಯು ತಕ್ಕುದೇ ಸರಿ ಮುಚ್ಚಲು ॥ ೫ ॥
ಗಗನಮಂ ಕವಿದರ್ಕತೇಜವನೊತ್ತಿ ಮೋಡವ ತುಂಗವೃ- ।
ಕ್ಷಗಳು ಚಾಳಿಸೆ ಸೋರ್ವ ನೀರ್ಪನಿಗಳ್ಗೆ ಮಂಜರಿವೃಂದವು ॥
ಒಗೆಯೆ ಶೋಭೆಯ ಪೊಚ್ಚ ಬಟ್ಟೆಯನುಟ್ಟು ಭೂಮಿಯು ತನ್ನಪ- ।
ನ್ನಿಗನಿಗೆತ್ತಿದ ತೋರಮುತ್ತಿನ ಪಚ್ಚ ಸತ್ತಿಗೆ ಕಾಣ್ಬದೈ[4] ॥ ೬ ॥
ಪ್ರಜರ ಕೈ ಸೆರೆಯಾದ ಝಾರನಿಗಿಂತು ಯೋಜಿಸಿ ಛತ್ರಮಂ ।
ನಿಜ ಮನೋಹರನನ್ನು ಸಾಂತ್ವನಗೆಯ್ವ ನೀನಿಳೆ ಬೇಗದಿಂ ॥
ದ್ವಿಜಬಲಾರ್ಣವ ಘೋಷದಾದಿಯೊಳಿಟ್ಟು ಭೃಂಗಸುನಾದಮಂ ।
ಭುಜಗಗಮ್ಯಗತಿಜ್ಞ ಮಂಜುಲ ವಾಯುಚಾರನ ಓಡಿಸೌ[5] ॥ ೭ ॥
ಕಿನಿಸೆ ಕಂಪಿಸೆ ಭೂಪನಾಂ ತವೆ ಸುಗ್ಗಿಪೆಂ ನರರೆಲ್ಲರಂ ।
ಮುನಿದು ಕೆಂಡವ ಕೂರೆ ಬೆಂಬುಡಿ ಜಿಮ್ಸಿ ಮುಚ್ಚುವುದೆಲ್ಲಮಂ ॥

---

2. ಸಾಮರ್ಥ್ಯನಂತರನ್ನು ಮಾಡಿದ. 3. ಕಂಡ ನೀರಿನ ಝರಿಯನ್ನು ಮುಚ್ಚಲಾಗಿ. 4. ಭೂಮಿಯು ತನ್ನ ಪತಿಗೆ ಛತ್ರವನ್ನು ಕಲ್ಪಿಸಿದ ತರಹವು ಇಲ್ಲಿ ವರ್ಣಿತವಾಗಿದೆ. 5. ನಿನ್ನ ಪತಿಯನ್ನು ಸಾಂತ್ವನಗೊಳಿಸುವ ನಿಮಿತ್ತವಾಗಿ ಹೀಗೆ ಹೀಗೆ ಸೈನ್ಯದ ಸಿದ್ಧತೆಯನ್ನು ಮಾಡು ಎಂದು ಭೂಮಿಗೆ ಬಿನ್ನಹ.

ಜನಪ ಕೋಟಲೆ ಸಾಕು ಮನ್ನಿಸವೇಳ್ಪುದೆನ್ನಯ ಮಾಳ್ಕೆಯಂ ।
ಎನುತ ಝೂರಗೆ ತೋರ ಮೇದಿನಿ ಸೌಖ್ಯಕೌಮುದಿಛಾಯೆಯಂ[6] ॥೮॥
ಪೊಡವಿಗಚ್ಚರಿಯಪ್ಪ ಪೆಂಪಿನ ಬಟ್ಟೆ ಚಿನ್ನದ ಪಟ್ಟಮಂ ।
ಬೆಡಗಿನಿಂ ಪೊಳೆವಂತೆ ಮಾಳ್ಪ ಸುಹಾಸರಂಜಿತರೂಪಮಂ ॥

ಕೆಡಹಿ ಬಂದಿರೊಳಿತ್ತು ಕೀಳಡಿಯಂ ಪುರುಳ್ಗೆಡಿಸಲ್ಕೆ[7]ಹಾ ।
ಕಡಲು ಪೊಂಡವದಾಃದವೊಲ್ ನೃಪಮೂರ್ತಿ ದೀನಮೆನಿಪ್ಪುದು ॥೯॥
ಗಿಡದ ಗಡ್ಟೆಯೊಳೀಡಿ ದೇಹವ ಸೀಡಿ ಕೈಯನು ಗದ್ದಕೆ ।
ಬಿಡದೆ ಕಂಬನಿಯಿಕ್ಕೆ ಮೋರೆಯ ಜೋಲುಗೈದಿಹ ಝೂರನು ॥
ಒಡಝುವಂ ಮುರಿದೊತ್ತಿ ತನ್ನಯ ವಾಸಮಂ ಸಿರಿ ಬಿಟ್ಟಳೆಂ– ।
ದೊಡನೆ ಉಮ್ಮಳಿಪಬ್ಜ ವಂಶದ ಬಳ್ಳಿ[7]ಯಂತಿಹನಕ್ಕಟಾ ॥ ೧೦ ॥
ಎನ್ನಯ ದೇಶವೆನ್ನ ಸಿರಿ ಯೆನ್ನಯ ವೈಭವವೆನ್ನ ತಂತ್ರಮ– ।
ತ್ತೆನ್ನಯ ಮಿತ್ರರೆನ್ನ ಬಳಗೆನ್ನಯ ಸೇವಕರಿತ್ತು ಪೋದರೋ ॥
ಎನ್ನುತೆ ಶೋಕದಿಂದ ಬಳಲುತ್ತಿಹ ಚಂಚಲನಪ್ಪ ಝೂರನು ।
ಪ್ರೋನ್ನತ ಬಾಡಬಾಗ್ನಿಯೊಳು ಕಾದ ಸುವರ್ಣದ
ನೀರ್ಗೆ ಪೋಲುವಂ ॥ ೧೧ ॥
ಮಾನವಪಾರ್ಥಿಗಾಮಿ ವರಕರ್ಪುರದೀಪಮೊ ಧರ್ಮವಾರ್ಧಿ
ಯೊಳ್ ।
ದೀನತೆಯಿಂದ ಜಾರ್ವ ಜಲಬುದ್ಬುದಮೋ ಕರುಣಾಬ್ಧಿ
ಮಧ್ಯದೊಳ್ ॥
ನಾಸುತೆ ತೇಲ್ವ ಚೀನಪಟಮೋ[8] ಸಮವೃತ್ತಿಪಯೋಧಿವೀಚಿಯೋ ।
ತಾನೆನೆಪಂತೆ ತೆತ್ತಿದನು ತನ್ನ ವರಾಂಗವ ಹೀನಸೇತಿಗೆ ॥ ೧೨ ॥

---

6. ಸೌಖ್ಯವೆಂಬ ಬೆಳದಿಂಗಳ ನೆಳಲನ್ನು ತೋರಿಸು. 7. ಕಮಲದ ಎಲ್ಲ ಜಾತಿಗಳನ್ನೊಳಕೊಂಡ ಒಂದೇ ಒಂದು ಬಳ್ಳಿಯಂತೆ. 8. ನೆನೆಯುತ್ತ ತೇಲುವಂಥ ರೇಶಿಮೆಯ ವಸ್ತ್ರವೋ ?

೫.

# ಮಧ್ಯರಾತ್ರಿಯಲ್ಲಿ ಕೇಳಬಂದ ಆಂಗ್ಲಗಾನವು.

[ ಧಾರವಾಡದಲ್ಲಿ ನಾನಿದ್ದ ನೆರೆಹೊರೆಯಲ್ಲಿ ಒಬ್ಬ ಕ್ರಿಶ್ಚನ್ನನ ಮನೆಯಿತ್ತು. ಅವನಿಗೆ ಒಂದು ಮುಂಗಡಿ ಕೂಸು ಇದ್ದು ಅವನ ಹೆಂಡತಿಯು ಅದೇ ಮತ್ತೊಂದು ಕೂಸನ್ನು ಹೆತ್ತಿದ್ದಳು. ಅವನ ಮನೆಯಲ್ಲಿ ಬಂದ ಒಬ್ಬ ತೊತ್ತು ಮುಂಗಡಿ ಕೂಸನ್ನು ಸಮಾಧಾನ ಮಾಡುವ ಉದ್ದೇಶದಿಂದ ಏನೋ ಹಾಡುತ್ತಿದ್ದಳು. ಒಮ್ಮೆ ಮಧ್ಯರಾತ್ರಿಯಲ್ಲಿ ಆ ಹಾಡು ನನಗೆ ಕೇಳಬಂದಿತು. ಪ್ರಶಾಂತವಾದ ರಾತ್ರಿಯಲ್ಲಿ ಆ ಹಾಡು ನನ್ನ ಮನಸ್ಸಿನಲ್ಲಿ ನಾನಾ ಕಲ್ಪನೆಗಳನ್ನು ಹುಟ್ಟಿಸಲಾಗಿ ನಾನವುಗಳನ್ನೆಲ್ಲ ಈ ಕವಿತಾರೂಪದಿಂದ ಬರೆದಿಟ್ಟೆನು. ಇದರಲ್ಲಿ ರಾತ್ರಿಯ ವರ್ಣನೆಯು ಬಹಳ ಸರಸವಾಗಿರುವುದಾಗಿ ಕಂಡುಬರುತ್ತದೆ. ಗಾನಭಾವಗಾನಸಂದೇಶಗಳೆಂಬ ಭಾಗಗಳಲ್ಲಿ ಪಾಶ್ಚಾತ್ಯಜ್ಞಾನದ ನಿರ್ದುಷ್ಟವಾದ ಸ್ವೀಕಾರವಿರುವುದು. ಸಮಗ್ರ ಕಾವ್ಯವೂ ರಸವತ್ತಾಗಿರುವುದೆಂದು ನನ್ನ ವಿಶ್ವಾಸವುಂಟು.

ಇದು ವಾರ್ಧಿಕ ಷಟ್ಪದಿಯಲ್ಲಿ ಉಂಟು. * ಈ ಸ್ಥಳಗಳಲ್ಲಿ ಪ್ರಥಮಾಕ್ಷರದ ಬಗ್ಗೆ ಇದ್ದ ಕವಿಸಾಂಪ್ರದಾಯವು ಭಂಗವಾಗಿರುತ್ತದೆ.

## ೧. ಗಾನಸಮಯವು.

ಸ್ತೋತ್ರರತ-ತಾರೆಗಳು[1] ತಮ್ಮ ಹೊಗಳಿಕೆಯೊಳ್ನ- ।
ಕ್ಷತ್ರಮಾಗುತೆ ತನ್ನ ಕಾಂತಿಯೊಳ್ಸರ್ವ ಪರ- ।
ತಂತ್ರಿಯೊಡಿಳೆಯನ್ನು ನಗುವಂತೆ ಪೊಳೆಯುಲವಳಾನನವು
ಕರಿದಾಗಿ ಮೇಣ್ ॥

1. ಮೊದಲನೆಯ ಎರಡನೆಯ ಪದ್ಯಗಳಲ್ಲಿ ನೂತನ ಶಾಸ್ತ್ರಶೋಧಗಳು ಕಾವ್ಯಮಯವಾಗಿ ವರ್ಣಿಸಲ್ಪಟ್ಟಿವೆ.

ಮಿತ್ರನಿಲ್ಲದ ಪಾಪಿ ತನ್ನೊಳೇ ಅಗಿವಂತೆ ।
ಧಾತ್ರಿತಾಂ ಪೊಡೆಮಗುಗಳಡಿಯಡಿಗೆಯದಿರುತಿರೆ[2] ।
ರಾತ್ರಿ ಸಂದಟ್ಟವಾಗಿರ್ದು ನಿಶ್ಯಬ್ದವಾಗುತೆ ಶಬ್ದಮಯ
ವಾಯಿತು ॥ ೧ ॥

ಗಿರಿಯಿಂದೆ ಗಿರಿಗೆಲರನುಯ್ಯಲಾಡುವ ಸುಯಿಲು ।
ತರುಲತೆಗಳೂಟವಿಲ್ಲದಕೆ ವಿಷವಾಯುವಂ ।
* ಕಾಡಿಯೆಲೆ-ಬೊಂಗಿಗಳನೆಳೆದು-ಕೊಳ್ಳುತೆ ದುಃಖದಿಂ ಬಿಟ್ಟ
ನಿಟ್ಟುಸಿರುಮೇಣ್ ॥

ತೊರೆದು[3] ನಿಂತಿಹ ತೋಟಪಟ್ಟಿಗಳ ಕಾವಲರು ।
ಮರೆಮೋಸದಯ್ಯನವರೆನಿಸಿರ್ದ ನರಿದೊಡ್ಡೆ- ।
* ಯೋರಂತೆ ಹೊಡೆವ ಕೇಕಿಗಳು ಮೇಳೈಸಿ ಕಾರಿರುಳ ಕೀರ್ದನಿ
ಕಾವುವು ॥ ೨ ॥

ನಿಶೆ[4]ಯೊಳಿದೆಗುದಿಯುಂ ನಿಚ್ಚಳವಾಗಿ ಕೇಳಬರ- ।
ಲುಸಿರಾಟವೆಗ್ಗಳಿಸಿ ಕಿವಿಗೆ ಕೀಸರವಾಗೆ ।
ಪುಸಿದನಿಯು ದೆಸೆದೆಸೆಯೊಳುಣ್ಮುವಂತಾಗೆ ಜನಮನವು
ಭಯಬಡುವಂತಿರೆ ॥

ಮಸಣಪಾಳ್ಮನೆಮರಂಗಳಿನೆದ್ದ ದೆವ್ವಗಳ್ ।
ನುಸುಳುವುವೊ ? ಕರಿಕಳ್ಳರುಂ ಹೊಂಚುವರೊ ? ಮತ್ತಂ ।
ಮುಸುಗೊಳ್ವ ಜಂತುಗಳ್ ಇಪ್ಪುವುವೊ? ಎನುವಳಕು ಕತ್ತಲೆಯು
ಕಂಗೆಡಿಪುದು ॥ ೩ ॥

---

2. ತನ್ನ ಹೊಟ್ಟೆಯ ಮಕ್ಕಳ ಹೆಜ್ಜೆಗೆ ಹೆದರಿ. 3. "ತೊರೆದು" ಎಂಬೊಂದೇ ಶಬ್ದದಿಂದ ಫಲಪೂರಿತವಾದ ತೋಟದ ವರ್ಣನೆಯು ಹೇಳಲ್ಪಟ್ಟಿದೆ. 4. ರಾತ್ರಿ.

## ೧೮. ಮಧ್ಯರಾತ್ರಿಯಲ್ಲಿ ಕೇಳಬಂದ ಆಂಗ್ಲಗಾನವು.

ದೂರದಿಂ[5] ಗಾಳಿ ನೂಂಕಿದ ದನಿಯು ಕೇಳಲದು ।
ಕೋರಿಕೆಯು ಕೈಗೂಡಿದಾ ಜನರ ಹೋಳಿಯೋ ? ।
ಪ್ರಾರಬ್ಧ ವೆರವಾಗೆ ಪಾಪಿಗಳು ಬೊಬ್ಬಿಡುವ ಬಳಲಿಕೆಯ
ಭೋರಾಟವೋ ? ॥

ಕಾರಿರುಳ[6]ಕಮ್ಮಾರನು ಧಾರಿಣಿಯ ದೇಹಿಗಳ ।
ಘೋರಭವತಾಪಮಂ ತಂಗೈಸೆಸುಮನರ್ಕ- ।
ಳಾರೈಕೆಯಿಂದೊರೆವ ಜೋಗುಳವೊ ? ಪೇಳೆನೆಂಬಂತೆ ಮನವುರೆ
ಮಿಡುಕಿತು ॥ ೪ ॥

ಭ್ರಮರ-ಶುಕ-ಹಂಸ-ಪಿಕಸುಸ್ವರಗಳಡಗಿರಲು ।
ದನಿಯನಾಂಕಿವೆಡೆಯೊಡೆವ ಸೂಳೆಗೇರಿಯ ಪರಾ- ।
ಕ್ರಮಗಮಕ ಗಾನವುಂ ನಿಲಲು ಗಂಧರ್ವ ವರಸಂಗೀತದಾ
ಸಮಯವಂ ॥
* ಕಾಮಿಸುತೆ ಭೂದೇವಿ ಸೌಮ್ಯದಿಂದುಸಿರ್ವಂತೆ ।
* ಸೀಮೆಸೀಮೆಗಳಲ್ಲಿ ಶಾಂತತೆಯು ಸೇರಿರಲು ।
* ಕಾಮಿನಿಯೆ! ನಿನ್ನಾಂಗ್ಲ-ಗಾಯನವು ಮೋಹಿಸಿತು ನನ್ನ
ಮನದೇಳಿಗೆಯನು । ೫ ॥

## ೨. ಗಾನವಿಸ್ತಾರ.

ಆರಯ್ಯದಾ ರಾಗ ಕುಣಿಯಲೆಳಸುವ ತಾಳ ।
ತಾರಮಂದರ-ಸಿನದ ತೀವ್ರಕೋಮಲನಾದ ।
ಪೇರಿಸಿದ[7] ಧೃತಮಂದರೀತಿ ಯೆಳೆದೆನ್ನುವಾ ಸ್ವರಗಳಂಕೂಡಿಮೆರೆವಾ॥

---

5. ಪ್ರತಿಯೊಬ್ಬನಿಗೂ ರಾತ್ರಿಯ ಕಾಲದಲ್ಲಿ ಹೃದ್ಗೋಚರವಾಗುವ ಭಯಾದಿ ಭಾವಗಳು ಯಥಾಸ್ಥಿತವಾಗಿ ೩ನೆಯ ಹಾಗು ನಾಲ್ಕನೆಯ ಪದ್ಯಗಳಲ್ಲಿ ವರ್ಣಿತವಾಗಿವೆ. 6. ರಾತ್ರಿಯೆಂಬ ಕಮ್ಮಾರನು ಜಗತ್ತಿನ ಜೀವಿಗಳ ಭವತಾಪವನ್ನು ನಿದ್ರೆಯಲ್ಲಿ ಮರೆಯುವಂತೆ ಮಾಡಲಾಗಿ. 7. ಮೇಲಿಂದ ಮೇಲೆ ಬರುವ.

ಪೌರದೇಶಿಕ ಗಾನಮಂ ಕೇಳೆ ಪಾಲಮು- ।
ನ್ನೀರಿನೊಳ್ಮಿಂದು ಶಶಿತಿಲಕವನ್ನಿರಿಸಿ ಸುರ- ।
ಸೌರಭವ ತೊಡೆದಮೃತಮಂ ಕುಡಿದು ಕಲ್ಪತರು-ತಲದೊ
ಳಿರ್ದ-ವೊಲಾದುದು ॥ ೬ ॥

ಕನಲಿ ಕೆಂಪಾಗಿ ನಿಜರಮಣನೆಲೆ ಜಗುಳ್ದ[8]* ನೆಂ- ।
ದೆನುತಪರದಿಶೆಯು ದೂತೆಯನು ತಗುಳಿಸಿದಲಾ[9] ।
ವನಿತೆ ತವಕದೊಳುಷೆಯು ಪೊಂಬಣ್ಣದಠನುಣೆಯು ಕದನ
ಸಾದುವ ಕಾಲಕೆ ॥

ಮುನೆವಳನು[10] ತಾನಾಗಿ ಕಾರಿರುಳು ನಿಂದೊಡವ- ।
ನನು ತವಿಸಿ ದಿನಮಣಿಯು ಬಣ್ಣಿಸಲು ಪಾಡಿದಾ ।
ಘನಗಾನಮೆಂಬಂತೆ ಶರತರದ ಭಾವಮಂ ಮೈಗೊಂಡುದಾ
ಗಾಯನಂ ॥ ೭ ॥

## ೩. ಗಾನಭಾವ.

ಮರುಳರೀ ಮೂಡಣಿಗರೀಗಲುಂ ತಮ್ಮ ಪರಿ- ।
ಪರಿಯ ಗತವೈಭವದ ನೆನಹಿನೊಳ್ ಮರೆದಪರು ।
ಭರದಿ ಮುಂದರಿವೆನ್ನ ಸಿರಿಯ ಸಂಭಾವಿಪರೆ? ನೋಳ್ಪೆನೆಂದ
ಪರ-ದಿಶೆಯು ॥

ತ್ವರಿತದೊಳ್ ತನ್ನ ಮುಮ್ಮೂರು[11] ಸರಸತಿಯರ್ಗೆ ।
ಯರಿಕೆಯಂ ಮಾಡಲ[12]ವರಿರದೆ ತಂತಮ್ಮ ಸಡ- ।
ಗರದ ಕೆಲಸವ ತೋರಿಸಿದರದನು ನರವಚನದಿಂದೆ ನಾನೇಂ
ಬಣ್ಣಿಪೆಂ? ॥ ೮ ॥

---

8. ಜಾರಿಹೋದನು. 9. ಹಿಂದಿನಿಂದೋಡಿಸು. 10. ಮುನೆಗಾವಲನು. 11. ಪಾಶ್ಚಾತ್ಯರಲ್ಲಿ ಒಂಬತ್ತು ವಾಗ್ದೇವತೆಗಳೆಂದು ನಂಬಿಕೆ. ಅವರಲ್ಲಿ ಪ್ರತಿಯೊಬ್ಬಳು ಒಂದೊಂದು ವಿಷಯದ ಅಭಿಮಾನ ದೇವತೆಯಾಗಿರುವಳು. 12. ಬಿಡದೆ.

## ೨೦. ಮಧ್ಯರಾತ್ರಿಯಲ್ಲಿ ಕೇಳಬಂದ ಆಂಗ್ಲಗಾನವು.

ಜ್ಯೋತಿಷಪದೇವಿ ಕೈಕೋಲಿನಿಂ[13] ತನ್ನ ಹ- ।
ಸ್ತಾಂತದೊಳ್ಮಿರೆವ ಗೋಲವನುರ್ಬಿ ತೋರಿಸಿದ- ।
ಳೈತಿಹಾಸಿಕೆ ತನ್ನ ಹಸ್ತಗತ ಪಟವ[14] ಬಿತ್ತರಿಸಿ ಚೆಲ್ವಾಗಿ ಮೆರೆದಳ್ ॥
ಪ್ರೀತಿಯಿಂ ತೂಗಿದುದು ಕಾವ್ಯದೇವೀತ್ರಯಂ[15] ।
ಥೈಥಯಿಸಿದರು ಮೂವರುಂ ನಾಟ್ಯದೇವಿಯರ್ ।
ಸಂತಸದೊಳಿದನೆಲ್ಲವಂ ನೋಡಿ ವಾರುಣಿಯು[16] ಗಾನದೇವತೆ-
ಗಳುಕಿದಳ್ ॥ ೯ ॥

ಎಲಗೆ! ನಿನ್ನಯ ಗತಿಯ ನೋಡಲಾರೆನು, ಮಗಳೆ, ।
ಮಲಿನವಸ್ತ್ರವ ತೊಲಗು ಸಪ್ತ[17]-ಸೂತ್ರಿಯನುಡಿಸು ।
ನಿಲದೆ ಸಂಚರಿಸು ಮಗು! ಪೂರ್ವದಿಗ್ದೇಶವಂ ಬಿಡು ಗಸಣೆ[18]
ಯೆನುವನಿತರೊಳ್ ॥
ಲಲಿತ ಚಂದ್ರಿಕೆ ತನ್ನ ಮೋಹದಾ ಕೈರವಂ- ।
ಗಳ ಸೂರೆ ಮಾಡಿದಂತೆಸೆಯೆ ತಾರೆಗಳು ಬಾನ್- ।
ದಳದಿಂದ ಬಿಜಯಗೈದಳು ದೇವಿ ತಳಿಸಿದಳ್ ಪ್ರತಿಭೆಯಂ
ತನ್ನ ಜನರೊಳ್ ॥ ೧೦ ॥

---

13. « ಯುರೇನಿಯಾ » ಇವಳ ಒಂದು ಕೈಯಲ್ಲಿ ಒಂದು ದಂಡವೂ ಮತ್ತೊಂದರಲ್ಲಿ ಪೃಥ್ವಿಯ ಆಕಾರದ ಒಂದು ಗೋಲವೂ ಇರುವಂತೆ ತೋರಿಸುವರು. 14. « ಕ್ಲಿಯೋ » ಇವಳ ಕೈಯಲ್ಲಿ ಸುರಳಿ ಸುತ್ತಿದ ಕಾಗದವಿದ್ದಂತೆ ಚಿತ್ರಿಸುವರು. 15. ಒಂಬತ್ತು ವಾಗ್ದೇವತೆಗಳಲ್ಲಿ ಮೂರು ಮೂರರಂತೆ ಗುಂಪು ಮಾಡುವರು. ಆ ಗುಂಪುಗಳಲ್ಲಿ ಇವೆರಡೂ ಇರುವುವು. 16. ಪಶ್ಚಿಮದಿಕ್ಕನ್ಯೆ. 17. ಗಾನದೇವತೆಯ ಹೆಸರು « ಟರ್ಪ್ಸಿಕೋರಿ » ಇವಳು ಬೀಸಪತ್ತಲವನ್ನುಟ್ಟಿಗೊಂಡಂತೆಯೂ ಕೈಯಲ್ಲಿ « ಲಾಯರ್ » ಎಂಬ ವಾದ್ಯವನ್ನು ಹಿಡಿದಂತೆಯೂ ತೋರಿಸುವರು. 18. ಚಿಂತಾತುರತೆ.

## ೪. ಗಾನಸಂದೇಶ.

ಸೇವಿಸಲು ನಿನ್ನ ಮೃದುಗಾನಮಂ ಮನ್ಮನದಿ ।
ತೀವಿರ್ದ ಜಂಜಡವು[19] ಪರಿದು ಪೋದುದು ಗಾನ- ।
ದೇವತೆಯ ಗೌರವವು ಚೆಂದಳಿರ ಸೋಂಪೊಡೆದ ಮಲ್ಲಿಗೆಯ ಮಾಲೆಯಂತೆ ॥
ಜೀವಮಂ ಪ್ರೇಮದಿಂ ತುಂಬಿದುದು ಲೋಕದೊಳ್ ।
ಪಾವನಂ ಪೊಂದದಾ ಭಾವಮೊಂದಿಲ್ಲವೆನೆ ।
ಗಾವಿಲನು ನಾನೆನ್ನ ಚಿತ್ತಮಂ ತಕ್ಕೈಸಿದತ್ತಿತ್ತು ಜಾಗ್ರತೆಯನು ॥ ೧೧ ॥

ಸರಸತಿಯ ಬೀಣೆಯಿಂಚರವ ಬಳಸಿದ ಗಾರಿ ।
ಸರಸಿಜೋದ್ಭವ ನಾದಮಂ ಪೆರ್ಚಿಸಿದೆ ನಿನ್ನ ।
ಸರಸ ಕಲಗಾನ-ಪೀಯೂಷಮಂ ಬಳಿಕಿತ್ತೆ ದಿವ್ಯದೃಷ್ಟಿಯ ದಯಿಸಿದೆ ॥
ಸರಸನೆ ಭಾರತಕೆ ತನ್ನಿರಿಕೆಯಂ ತಿಳುಪಿ ।
ಸರಿಸಮಂ ತೋರ್ವೆನೆಂದೆಂಬ ಗೀತೇಶ್ವರಿಯು- ।
ಸಿರಿಸಿದಳು ನಿನ್ನ ವದನಾಬ್ಜದಿಂದಲ್ಲದೊಡೆ ಸಂದುದೇ ಈ ಬಾವವು ? ॥ ೧೨ ॥

---

## ದ್ವೇಷಭಾಂಡಾರ ನಾಟಕದೊಳಗಿನ ಪದ.

ರಾಗ ಸಾರಂಗ. ತಾಳ ಕೇರವಾ. "ತರುಲಾ ಪ್ರಿಯ" ಎಂಬಂತೆ.

ಸುಜನಾಶ್ರಯ ದೇವ ಶಿಖಾಮಣಿಯೇ । ಪ ॥
ದುರಿತ ವಿಚಾರವು ಸೇರಿ ಮನೋಮನ ।
ದರವ ಹಿಯಾಳಿಪುದೋ ಸುಮನ ॥ ೧ ॥

---

19. ಜಾಡ್ಯತೆಯು.

೬.

# ಪ್ರಾರ್ಥನಾ-ಪಂಚಕ.

[ಕೆಲವು ವರ್ಷಗಳ ಹಿಂದೆ ಬೆಳಗಾವಿಯಲ್ಲಿ "ಜ್ಞಾನಾಂಜನ"ವೆಂಬ ಮಾಸಿಕ ಪುಸ್ತಕವು ಪ್ರಕಟವಾಗಿ ಕೂಡಲೇ ಮುಗ್ಗಿಹೋಯಿತು. ಆಗ ಅದನ್ನು ಹರಸುವ ರೀತಿಯಿಂದ ಈ ಕವಿತೆಯನ್ನು ಬರೆದಿದ್ದೆನು. ಜ್ಞಾನಾಂಜನವೆಂಬ ಸಾಮಾನ್ಯ ವಿಷಯವನ್ನೇ ಕುರಿತು ಇದನ್ನು ಓದಬಹುದೆಂಬ ವಿಚಾರದಿಂದ ಇದನ್ನು ಇಲ್ಲಿ ಮುದ್ರಿಸಿರುವೆನು. ಇದರಲ್ಲಿದ್ದ ಐದು ಶ್ಲೋಕಗಳಲ್ಲಿ ಕ್ರಮವಾಗಿ ಆಕಾಶ, ಪೃಥ್ವೀ, ಅಪ್, ತೇಜ ಮತ್ತು ವಾಯು ಇವುಗಳನ್ನು ಕುರಿತು ಬರೆದಿರುವೆನು. ಈ ಕವಿತೆಯು ಶಿಖರಿಣೀ ವೃತ್ತದಲ್ಲಿ ಉಂಟು.]

ಅಜಾಂಡಂ ಕಾಲಾಂತಂಬರೆ ಜಲಮಯಂ ಆಗೆ ಅಪರೆಡೆಳ್ ।
ನಿಜಾಂಗಸ್ವಾಸ್ವಾದಂ ಬಿರಿಯೆ ಶ್ರವಸಂಸ್ಥೈದ ಹರಿಯೋ ॥
ಅಜಯ್ಯಾಲಸ್ಯಂ ತಾಂ ಕವಿದೊಗೆದ ಕರ್ನಾಟಕಜನಂ ।
ಗರ್ಜಾಡ್ಯಾಂಗಂ ಜ್ಞಾನಾಂಜನಮಿರಲಿ ಸೌಭಾಗ್ಯಕೆ ಸದಾ । ೧ ॥
ಅಣುಂ ರೇಣುಂ ಜೀವಂ ಪೊಡಲೆನಿಸಿದೆಲ್ಲಂ ಬೆಳೆಸುತುಂ ।
ಗುಣಾಯಾನಂ[1] ಆಯಾ ವಿಷಯಗಳಿಗಪ್ಪಂತೆ ನೆಗಳ್ದುಂ ॥
ಕ್ಷಣಕ್ಕಾ ವೈಫಲ್ಯಂ ತರದೆ ಸುಕೃತಂ ತೋರ್ಪೆ ಗಡ ಬಿ- ।
ನ್ನಣಂ ಪೊಂಪೇ ಜ್ಞಾನಾಂಜನಕೆ ಧರೆಯೇ ಕೊಟ್ಟ ಮತಿಯುಂ ।೨॥
ಸುಧಾಸಾರಂ ಜ್ಞಾನಂ ಪತಿಕರು ಚಕೋರಾಕುಲಮನರ್ ।
ಸುಧೀಮಂತರ್ವಿದ್ಯಾ ಪ್ರಸರಗುಣ ಪೀಯೂಷಘನರ್ಗೆ ॥
ಮದಾವಿದ್ಯಾಗ್ರೀಷ್ಮಂ ಸುಡುತಿಹುದು ಕರ್ನಾಟಪ[2] ಘನಾ ।
ಸ್ಪದಂ ತೋರೈ ಜ್ಞಾನಾಂಜನವೆ ಗುರು ತಂಗಿತ್ತು ತಣಿಪಾ ॥ ೩ ॥

---

1. ಗುಣಸ್ವಭಾವವನ್ನು. ಬೇರೆ ಬೇರೆ ವಸ್ತುಗಳಿಗೆ ಬೇರೆ ಬೇರೆ ಯೋಗ್ಯವಾದ ಗುಣಸ್ವಭಾವಗಳನ್ನು ಕೊಟ್ಟು. 2. ನೀರಿರುವ ಮೋಡಗಳನ್ನು ಬರಗೊಡು.

ಕಲಾನಾಥಂ ದೀನಂ ಭಗಣಮುದು ನಿಸ್ತೇಜ ಕಣಗಳ್ ।
ವಿಲೋಲಂ ತಾಂ ವೈಶ್ವಾನರ ನಿನನು ನಿನ್ನ ಪ್ರತಿಮೆಯುಂ ॥
ದಿಲಾಲೋಕಂ ನಿನ್ನಂ ಪೊಗಳುತಿಹುದೈ ತೇಜನಿಧಿಯೇ ।
ಜ್ವಲದ್ದೀಪ್ತ[3] ಜ್ಞಾನಾಂಜನವ ದಯಿಸೈ ಕನ್ನಡಿಗರೊಳ್ ॥ ೪ ॥
ಮಹಾದಾವಾಗ್ನೀಶಂಮಲಯಗಿರಿ ಸೌರಭ್ಯವಹನೇಂ ।
ವಿಹಾರಾಂತಶ್ರಾಂತಂಗಳೆವನುದಧಿಕ್ಷೋಭಕರನೇಂ ॥
ಆಹಾ ಸ್ವೇಚ್ಛಾರೂಪಂ ಜಗದಮಿತ ಕಲ್ಯಾಣಕರನೇಂ ।
ಬಹುಪ್ರೌಢಂ ಜ್ಞಾನಾಂಜನಕೆ ಕುಡು ನೀಂ ವಾಯು ಬಲಮಂ॥೫॥



## ದ್ವೇಷಭಾಂಡಾರ ನಾಟಕದೊಳಗಿನ ಪದ.

"ದೇ ಹಾ ತಾ ಶರಣಾಗತಾ" ಎಂಬಂತೆ.

ದೇವಾ ಕಾಯೋ ಕರುಣಾರ್ಣವಾ ।
ದನುಜಕುಲವನರಿಯುವ ಕಾರಣವ ಪಾಲಿಸುವ ನಿವಾರ
ಭಾವ ॥ ಪ ॥
ಜ್ಞಾನ ಹಾಸಿಯಲಿ ಮಾನವ ಸ್ವಾರ್ಥದಾ ಭೋಗ ಬಳಿನ
ಬಗೆಯಿಂದ ಕಿಡಿಪ ಮನವ ।
ಮನ್ನಿಸಿ ದೇಶವ ಸದಾ ಖಲರನು ನೀಂ ತವಿಸು ರಮಾಧವಾ
ಹೇ ದೇವಾ ॥ ೧ ॥

3. ಎಲ್ಲ ಪ್ರಕಾಶಗಳಿಗಿಂತ ಹೆಚ್ಚಿನ ಪ್ರಕಾಶವುಳ್ಳದು ಜ್ಞಾನವು.

೭.

# ದಿವ್ಯಾರ್ಕನಿರ್ದೇಶಂ ಫಲಂ.

[ ಈ ಸಂಸಾರದಲ್ಲಿ ನಡೆದ ಆಚಾರವಿಚಾರಗಳನ್ನು ಒದಗಿಬರುವ ಸಂಗತಿಗಳನ್ನೂ ಲಕ್ಷ್ಯಪೂರ್ವಕವಾಗಿ ನೋಡಹೋದರೆ ನಮಗೆ ಒಂದು ಬಗೆಯ ನಿರ್ವೇದವುಂಟಾಗುವುದು. ಕತ್ತಲಿಯ ಕಾಲದಲ್ಲಿ ಮಾಡಿದ ಕಾರ್ಯಗಳು ಹೇಗೆ ಅವ್ಯವಸ್ಥಿತವಾಗಬೇಕೋ ಹಾಗೆ ಸೂರ್ಯನು ಪ್ರಕಾಶಿಸುವ ಕಾಲದಲ್ಲಿ ಕೂಡ ನಡೆಯುತ್ತಲಿರುವುವು. ಇದೆಂಥ ಅನ್ಯಾಯವು. ದಿವಾಕರನು ಕಣ್ಣೆದಿರಿಗಿದ್ದರೂ ಕಣ್ಣು ಮುಚ್ಚಿಕೊಂಡು ಮುಂದುವರಿಯುವ ಜನರನ್ನು ನೋಡಿದರೆ ಮನಸ್ಸಿಗೆ ಖೇದವಾಗದೆ ಇದ್ದೀತೆ? ಇಂಥ ಅವ್ಯಾಪಾರಗಳು ನಡೆದ ಮೇಲೆ ದಿವಾಕರನಿದ್ದಾದರೂ ಏನು ಫಲ? ಏನೂ ಫಲವಿಲ್ಲವೆಂಬಂತೆ ಜನರು ತಮ್ಮ ಕೃತಿಯಿಂದ ತೋರಿಸಿದರೂ ದಿವಾಕರನು ದಿವ್ಯವಾಗಿಯೇ ಸರ್ವಕಾಲದಲ್ಲಿಯೂ ನಮಗೋಸುಗ ಹೊಳೆಯುತ್ತಲೇ ಇರುವನಲ್ಲವೇ? ಈ ಕವಿತೆಯು ಕೆಲವು ದಿನಗಳ ಮುಟ್ಟಿಗೆ ಪುನರುಜ್ಜೀವನವನ್ನು ಹೊಂದಿದ್ದ “ಪ್ರಭಾತ” ದಲ್ಲಿಯೇ ಮುದ್ರಿತವಾಗಿತ್ತು.]

ರವಿ ಸಸ್ಯಾಳಿಗೆ ಜೀವ ವಿಶ್ವಕೆಲೆ ಸುಪ್ರಖ್ಯಾತತೇಜೋಧನಂ ।
ರವಿಯಿಂದಂ ಮಳೆ ಬಾಧ್ಧಿಯೇಳ್ಗೆಗೆ ಇನಂ ಮುಖ್ಯಂ
ಸಹಾಯಂ ಸದಾ ॥
ರವಿ ದೋರಲ್ ದಿನಕಾರ್ಯಸಿದ್ಧಿಗೆ ಬಲಂ ಸಂಪತ್ಪ್ರಭಾವರ್ಧನಂ ।
ರವಿಯಂ ಪೂಜಿಸುತಿರ್ಪ ಮಾನಿಸರದೇಂ ಕೀರ್ತ್ಯನರಾ
ಕಾಂತಿಯುಂ । ೧ ॥

ಗುಣಿಯಂ ಮನ್ನಿಸರಾರ್ಯಕಾರ್ಯವನು ಕೈಕೊಳ್ಳರ್ ಮಹಾ
ಗರ್ವದೊಳ್ ।
ಪಣಿಸರ್ ದೀನ ಜನಾಳಿಯಂ ಪ್ರಗುಣಿಸರ್ ಧರ್ಮಾರ್ಥಕಾಮಾ
ದಿಯಂ ॥

ಎಣೆಸುತ್ತುಮಾರ್ಜವದಿಂದೆ[1] ಪುಣ್ಯಕೃತಿಯಂ ಬಾಳರ್ ಸುಖಾಲಂಬಿಗಳ್ ।
ಮಾಣರ್ ಪಾಪ ವಿಪಾಕಮಂ ಪಗಲದೇಂ ದೋಷಕ್ಕೆ ಪಕ್ಕಾ
ದುದೋ ॥ ೨ ॥

ನುಡಿಯಂ ತಪ್ಪಿಸುತಂ ಪುರುಳ್ಗಿಡುತೆ[2] ಮೋಣ್ ವ್ಯಾಪಾರದಿಂ
ಬೆಂಬವೊಲ್ ।
ಸೆಡೆಯುತ್ತ್ಯೈಸಿರಿ ಕೈಸಿರಿ[3]ತ್ತುರುಬಿನಿಂ ವಿಶ್ರಾಂತಿಯುತ್ತ್ಯಾಶೆಯಿಂ ॥
ಎಡೆಸೋಳಿಲ್ಲದೆ[4] ತಿಂದು ಕೊಬ್ಬಿ ಮೆರೆವಾ ಕಾಲಕ್ಕೆ ಬೇಡುಂಬರಂ ।
ದುಡಿಸುತ್ತಾಜನ ವೃತ್ತಿಯಂ ಕೆಡಿಸುತಂ ಮಾಳ್ಪರ್ ಮಹಾ
ದ್ರೋಹಮಂ ॥ ೩ ॥

ಪೊಡಲೆಂಬರ್ ಕಿರಿಜೇಂಟೆಯೆಂಬರೊಲನಿಂದೊರ್ಕೆಯೆಂದಾಳುತೇಂ[5] ।
ಕಡುವೇಗಕ್ಕುರೆ ಮೆಚ್ಚಿ ಬೆಂಕೆ-ಹೊಗೆ ಮಿಂಚಿಂ ಪೋಪತೇರೆಂಬರು ॥
ಕಡಿವರ್ ಕೊಲ್ಲುವರೇರ್ದ ತೇರ್ಬಡದೊಳಂ ಕೊಚ್ಚಿಟ್ಟು
ದೂರ್ಕೈದಸರ್ ।
ದಿಡವೈ[6] ಸಪ್ರಾಣಿಗಳನ್ನನೇಕ ನರರಂ ಬಿವ್ಯಾರ್ಕರ್ ನಿರ್ದೇಂ ಫಲಂ ॥ ೪ ॥



1. ಸರಳ ಮನಸ್ಸಿನಿಂದ ಪುಣ್ಯಕಾರ್ಯವನ್ನು ತಿಳಿದುಕೊಳ್ಳದೆ. 2. ಸತ್ವಹೀನರಾಗಿ. 3. ಅಧಿಕಾರ. 4. ಸ್ಥಳಕಾಲಗಳ ವಿಚಾರವಿಲ್ಲದೆ. 5. ಸ್ವರಕ್ಷಣೆಯೆಂದು ಒದರುತ್ತ. 6. ದಿಟ.

೮.

# ದೇವರಲ್ಲಿ ಅರಿಕೆ.

[“ಸಂಕಟ ಬಂದಾಗ ವೆಂಕಟರಮಣ” ಎಂಬುದೊಂದು ಗಾದೆಯುಂಟು. ನನಗೆ ಒಂದು ಸಮಯದಲ್ಲಿ ಅನಿವಾರ್ಯವಾದ ಗಂಡಾಂತರವು ಬಂದು ಮಾನಹಾನಿಯಾಗುವಂತೆ ಕಂಡುಬಂದಿತು. ಆಗ ಚಿಂತಾಕ್ರಾಂತನಾಗಿ ದೇವರ ನಾಮಸ್ಮರಣೆಯನ್ನು ಮಾಡುವ ಕಾಲದಲ್ಲಿ ಈ ಬಗೆಯಿಂದ ನನಗೆ ಬೋಧವು ದೊರೆಯಿತು. ದುಃಖದಲ್ಲಿದ್ದಾಗಲೇ ಮನುಷ್ಯನ ಚಿತ್ತವು ಅನೇಕಪ್ರಕಾರವಾಗಿ ಜಾಗ್ರತವಿರುತ್ತದೆ. ಕವಿತೆ ಬರೆಯದೆ ಬಿಟ್ಟು ಕೊಟ್ಟ ಬಳಿಕ ಎಷ್ಟೋ ದಿನಗಳಾದ ತರುವಾಯ ದುಃಖಮುಖದಿಂದ ನನಗೆ ಕಾವ್ಯಸ್ಫೂರ್ತಿಯಾಯಿತು.

ಹೊರಗೊಂದನೊಳಗೊಂದ ನಿರಿಸಬೇಡೆಲವೊ ನಾರಾಯಣ ।
ನಿರುತದಲಿ ನನ್ನಿಯನೆ ತೊಳಗಿಸೆನ್ನೊಳು ನಾರಾಯಣ ॥ ೧ ॥
ಜನರು ಕಾಣರು ನನ್ನ ಮನವನೆಂದೆನುತೆ ನಾರಾಯಣ ।
ಮನಕೆ ವಿದ್ರೂಪವನು ತರಿಸಬೇಡೆಲವೊ ನಾರಾಯಣ ॥ ೨ ॥
ಜನರು ಹೊರಗಣ ನಗೆಗೆ ಮೋಹಿಪರೆಂದು ನಾರಾಯಣ ।
ನನಗೆ ದುಷ್ಕೃತಿಯೊಳಿಚ್ಛೆಯನು ತೋರದಿರು ನಾರಾಯಣ ॥ ೩ ॥
ಜಗದೊಳಗೆ ಅಧಿಕಾರವೆಂಬುದದಲಘುವೆ ನಾರಾಯಣ ।
ಲಘುಚರಿತವದರಿಂದೆ ಪುಟ್ಟದಿರಲೆನಗೆ ನಾರಾಯಣ ॥ ೪ ॥
ಲೋಕದೊಳಗಣ ಜನರ ಬೆಲೆಯರಿಯದಂತೆ ನಾರಾಯಣ ।
ಕಾಕುಬಗೆಯನು ನೀಡಿ ಪಾಪಕೆಳೆಯದಿರು ನಾರಾಯಣ ॥ ೫ ॥
ನನ್ನಾಶೆ ನನಗಿರಲು ಪೆರವರಾಶೆ ಗಿಡೆ ನಾರಾಯಣ ।
ಬನ್ನವನು ನಾನೆಂದಿಗೂ ತಾಳೆನೆಲವೊ ನಾರಾಯಣ ॥ ೬ ॥
ಪರರ ದುಃಖವ ಕಂಡು ಹರುಷವನು ಪಡೆಲು ನಾರಾಯಣ ॥
ಸೆರಗಿನಲಿ ಕಟ್ಟಿದ್ದ ಬೆಂಕಿ ತಾನಹುದು ನಾರಾಯಣ ॥ ೭ ॥

ಪರರ ಹಿತವನು ತಿಳಿಯುತವರಿಗನಂವುಗೊಡೆ ನಾರಾಯಣ ॥
ನರಕಯಾತ್ರೆಯೊಳು ಗೋಪಾಲವದು ದಿಟವು ನಾರಾಯಣ ॥ ೮ ॥
ನಾರಾಯಣನೆ ನಿನ್ನ ಸೇರುವಾಸೆಯದು ನಾರಾಯಣ ।
ದೂರಾಗಿ ಸಮಬುದ್ಧಿಯನು ಕಾಣೆನಯ್ಯ ನಾರಾಯಣ ॥ ೯ ॥
ಈ ಸಮಯದೊಳು ದುಷ್ಟಜನ ಬಾಧೆಗಳ ನಾರಾಯಣ ।
ವಾಶಮಾಡದೊಡೆನಗೆ ಲೇಸಿಲ್ಲವಯ್ಯ ನಾರಾಯಣ ॥ ೧೦ ॥
ಒಳ್ಳೆಬಗೆಯನು ನೀಡಿ ಕಾಯಬೇಕೆಲವೊ ನಾರಾಯಣ ।
ಒಳ್ಳಿಯುವನೆನಿಸಿಕೊಂಡಳಿವವೊಲು ದಯಿಸು ನಾರಾಯಣ ॥ ೧೧ ॥



## ದ್ವೇಷಭಾಂಡಾರ ನಾಟಕದೊಳಗಿನ ಪದಗಳು.

ರಾಗ ಮಾಂಡಗಭಾರ್. ತಾಳ ದಾದರಾ. 'ಮಾನಸಕಾ ಬಧಿರಾವೆ' ಎಂಬಂತೆ.

ದೈವಬಲ ಪತಿರಾಯ ।
ನವವಿದೇನಲ್ಲ ಜಗಕೆ ॥ ಪ ॥
ಬಲವಂತನಾವ । ಇಲಾ-ಕಾಂತ ನಾತ ।
ಕಲಿಯಾಗೋ ವಿನಯಾ । ನಾಸ ॥ ೧ ॥



ರಾಗ ಬಾಗೇಸರಿ. ತಾಳ ತ್ರಿವಟ. 'ಪ್ರೇಮ ನಚ ಜಾಯಿ' ಎಂಬಂತೆ.

ದೇವ ಪರಮೇಶ, ಕಾಯೋ ।
ಜೇವಂಗೆ ಶಾಂತತೆಯನೀ ಈಯೋ ॥ ಪ ॥
ವಿಷಯ ವಾಸನ ಶಿಖಿಗೇ ಸಮಾನ ।
ನಿಶ್ಶೇಷಾಂತ ಕಾರಿ ಶಾಂತತೆಯಾವಸಾನ ॥ ೧ ॥

## ೯.

# ಮೋಹಿನೀವಿರಹ.

[ಈ ಕೃತಿಯು ಕೀಟ್ಸ್ ಕವಿಯು ಆಂಗ್ಲ ಭಾಷೆಯಲ್ಲಿ ಬರೆದ "ಇಸಾಬೆಲಾ" ಎಂಬ ಕವಿತೆಯ ಅನುವಾದವು. ಇದನ್ನು ಅತಿಶಯ ಸರಳ ಭಾಷೆಯಲ್ಲಿ ಬರೆದಿರುವೆನು. ಇದರಲ್ಲಿ ವರ್ಣನೆಗಿಂತ ಕಥಾಭಾಗವೇ ವಿಪುಲವಾಗಿರುವುದು. ಆದರೆ ಕೊನೆಯ ಒಂಬತ್ತು ಶ್ಲೋಕಗಳನ್ನು ನಮ್ಮ ಕಾವ್ಯರೀತಿಗನುಸಾರವಾಗಿ ಬರೆದು ಕಥೆಯನ್ನು ಸಮಾಪ್ತಿಗೊಳಿಸಿರುವೆನು. ಈ ಕಥೆಯಲ್ಲಿ ನಿರೂಪಿತವಾದ ವಿಷಯಗಳಲ್ಲಿ ದುಃಖವೇ ಪ್ರಾಧಾನ್ಯವಾಗಿರುವುದು. ಮೋಹಿನಿಯ ಪ್ರೇಮ ನಿರ್ಭರವನ್ನು ಕಂಡು ಅವಳಿಗೆ ಬಂದ ವಿಪತ್ತಿನ ಬಗ್ಗೆ ಎಲ್ಲರೂ ಮನಃಪೂರ್ವಕವಾಗಿ ಶೋಕಬಡುವುದು ಸಹಜವು. ನಿರ್ವ್ಯಾಜವಾದ ಪ್ರೇಮಕ್ಕೆ ದುರವಸ್ಥೆಯುಂಟಾಗುವುದು ಎಂಥ ಹೃದಯದ್ರಾವಕ ಪ್ರಸಂಗವು! ಈ ದುರ್ವಿಪಾಕವು ಎಂಥ ನ್ಯಾಯವೋ? ದೇವರಿಗಷ್ಟೇ ಇದರ ಗುಟ್ಟು ತಿಳಿದಿರಬಹುದು.]

ಇರುವಳೊರ್ವಳು ದಿವ್ಯಸುಂದರಿ ।
ಪರಮ ಸದ್ಗುಣ ಧನವಿರಾಜಿತೆ ।
ವಿರಹಿ[1] ಮೋಹಿನಿಯೆಂಬ ತರುಣಿಯು ಕೂರ್ತಳ್ ಭೃತನನ್ನು ॥
ಅರಿದು ತನ್ನಯ ಹಾಳು ದೈವವ ।
ಮರುಗುವನು ದಿನದಿನಕೆ ಭೃತನುಂ ।
"ಸರಿಯೆ ಮೋಹಿನಿಯೊಳನು ಬಯಸುವುದ"ದೆನುತ ಚಿಂತಿಸುತ ॥
"ನಾನು ಬಡ ಸೆರೆಯಾಳು ಮೋಹಿನಿ ।
ತಾನು ಸಿರಿಮಗಳಿರ್ದೊಡಂ ಗಡ ।
ಮೌನದಿಂದವಳನ್ನು ಬಯಸುವೆನು ಮೂಢನಾನಲ್ತೇ" ॥

---

1. ವಿರಹಿ ಎಂಬ ಶಬ್ದದಿಂದ ಮೋಹಿನಿಯ ಭವಿತವ್ಯತೆಯನ್ನು ಈಗಲೇ ಸೂಚಿಕೊಟ್ಟಂತಾಯಿತು.

ಧ್ಯಾನಿಸುತಲಿರಲಿಂತು ಭೃತ ತಾಂ ।
ಶಾನೆ ನೊಂದಳು ಬಾಲೆ ಮೋಹಿನಿ ।
ಮಾನವನ್ನರೆ ಕಾಯ್ದು ಭೃತನನು ಗೆಲ್ವೆನೇ ಎಂದು ॥ ೨ ॥
ಹರಡೆ ಪ್ರೇಮಾವರಣ ವೆತ್ತಲು ।
ತೊರೆಯುದಾಯಿತು ಭೃತನ ನೋಟವು ।
ಸರಸಮಹ ಮೋಹಿನಿಯ ರೂಪವನೀಗ ಮೋಹಿನಿಯು ॥
ಬರೆವಳೈ ಚಿತ್ರದಲಿ ಭೃತನನು ।
ನಿರುತಮುವಳಕ್ಕರದ ವೀಣೆಯು ।
ಸುರಿಸುವುದು ನಿಜರಮಣವಾರ್ತೆಯ ನಾಡನಾದದಲಿ ॥ ೩ ॥
ಬರಲು ಬಾಗಿಲವನ್ನು ತೆರೆಯುತ ।
ನಿರಿಕಿಪಳು ಭೃತನಾನನೇಂದುವ- ।
ನರಿತದನು ಮೋಹಿನಿಯ ನೋಳ್ಪನು ದೂರದಿಂದವನು ॥
ಕೊರಗುವನು ಸಲೆ ರಾತ್ರಿಯೆಲ್ಲವ ।
ಬರುವನೇ ಗಡವಾಗಿ ತರಣಿಯು ।
ತರುಣಿ ಮೋಹಿನಿಯಾಸ್ಯಕಮಲವ ತೋರ್ಪನೇ ಎನುತ ॥ ೪ ॥
ಪೊಳೆವ ಗಲ್ಲವು ಬಾಡಿತ್ತೈ ತಿಂ- ।
ಗಳಲಿ ಬಳೆದಿತು ಚಿಂತೆಯುದು ಮೇಣ್ ।
ಜೆಳಗಿನಲಿ ನಾಸಿಂದು ರಮಣಿಗೆ ಪೇಳ್ವ ಮನವನ್ನು ॥
ಗಳಿಸುವೆನು ಸೋದರಿಯ-ವಚನವ ।
ಬಳಿಕ ಸುಖಿಸುವೆನೆಂಬನಾ ಭೃತ ।
ಒಳಲುವಳು ಸತಿಯಿತ್ತ ಕೇಳದೆಯುವನ ವಚನವನು ॥ ೫ ॥
ಬಾಡಿದುದು ಕೌಮಾರಿ ಕದಪದು ।
ನೋಡುತಲೆ ಸಣ್ಣಾಗಿ ಪೋಯಿತು ।
ಕಾಡುವರ್ಭಕನನ್ನು ಮಲಗಿಪ ತಾಯಿಯೆದೆಯಂತೆ ॥

## ಮೋಹಿನೀವಿರಹ.

ನೋಡಿ ಮೋಹಿನಿ ಬಡುವ ತಾಪವ ।
ಕಾಡುವನು ಭೃತ ತನ್ನ ಮನವನು ।
ದೂಡಬಹುದೇನವಳ ಚಿಂತೆಯನೆಂದು ಬಗೆಗಿಟ್ಟ ॥ ೬ ॥
ತಿಳಿದುದಾದರು ಮಾತನಾಡನು ।
ಕಳೆದು ಮನಸಿನ ದುಗುಡವನು ಗಡ ।
ಬಳಿಸಲಾಸಿಪನಂತರಂಗದಿ ಮನವ ಧೈರ್ಯವನು ॥
ಅಳವಡಿಸಲಿದು ಸಾಲಲಾರದೆ ।
ಕಳಚುವುದು ನಿಶ್ಚಯವು ಸವಿನುಡಿ ।
ಮೊಳೆವುವತ್ತಲೆ ವಿನಯಗುಣ ಮಿಗಿಲಾಗೆ ಭೃತನಲ್ಲಿ ॥ ೭ ॥
ಅರುಹಲಾರನೆ ಕೇಳಲಾರದೆ ।
ತೊರೆಯಲಾರದೆ ಮರೆಯಲಾರದೆ ।
ಮರುಮರುಗಿ ಸಣ್ಣಾಗಿ ಸವೆದನು ಶಿಶುವಿನಂದದಲಿ ।
ಅರಿತು ಭೃತನೀ ಪ್ರೇಮನಮ್ರತೆ ।
ವಿರಹಲಯವನು ಜಾಣೆ ಮೋಹಿನಿ ।
"ಅರಸೆ"— ಭೃತನೆಂದೆಂದು ನಿಂತಳು ಮಧ್ಯದಲಿ ನಾಚಿ ॥ ೮ ॥
ನಯನಬಾಣೆಗಳಲ್ಲಿ ಮತ್ತಭಿ- ।
ನಯದಿ ಯಡಗಿದ ಮರ್ಮವಿದು ಸುವಿ- ।
ನಯದಿ ಪೇಳಿದನಾಗ ತನ್ನಾಂತರ್ಯ ಮೋಹಿನಿಗೆ ॥
ಪ್ರಿಯಳೆ ಚಿಂತಿಸಿ ನಿನ್ನ ದೈನ್ಯವ ।
ಜಯಿಸಿ ನಾಂ ಧೈರ್ಯವನು ಪೇಳುವೆ ।
ಸುಯಿದು ಸುಂಗುವ ನನ್ನ ಗತಿಯನು ನಿನ್ನ ಕಿವಿಯಲ್ಲಿ ॥ ೯ ॥
ನಂಬುವೊಡೆ, ಪ್ರಿಯೆ, ಇದನು ನಂಬೇ ।
ಇಂಬುದೋರಕವು ಹೃದಯದೆನ್ನಯ ।
ನೀಂ ಬಿಡಲು ಪರನಾರಿಗೆನ್ನುನ್ನವನ್ನು ಮೋಹಿನಿಯೇ ॥

ಅಂಬುಜಾಕ್ಷಿಳೆ ನಿನ್ನ ಕೀರ್ತಿಯ ।
ಬಿಂಬವನು ನಾಂ ಕೆಡಿಸಲೆಳೆಯೆನು ।
ತುಂಬಿದೆಂದರಿಯಾದರುಂ ನಸ್ಸಿರವು ನೀಂ ಜರಿಯೆ ॥ ೧೦ ॥
ಮದನನ್ನೈ ಚಳಿಗಾಲ ಕೆಡಿಪನು ।
ಸುದತಿ ನೀಂ ಮಧುಮಾಸ ಬೀರುತೆ ।
ಸದಯದಿಂದೀಗೆನಗೆ ನೀಡುವೆ ಎಂಥ ಪುಷ್ಪವನು ॥
ಬದಿಗೆ ಮಾಡುತಲಿಂತು ಮೈಚಳಿ ।
ಗದಿಸುತೀರ್ವರು[2] ಪಡೆದು ಸೊಗಸನು ।
ಮುದದಿ ಹಿಗ್ಗಿದರಂದು ವಾಸಂತನವಕುಸುಮದವೊಲ್. ೧೧ ॥
ಮಲಯ ಮಾರುತನಿಂದ ಸರಿಸಿದ ।
ಚೆಲುವ ಮಲ್ಲಿಗೆ ಜೋಡಿನಂದದಿ ।
ಕೆಲಕೆ ಸಾರ್ದರು ಸುಖದಿ ಕೂಡಲು ಮತ್ತೆ ಜತೆಯಾಗಿ ॥
ನಲಿದಳಾ ದಿನ ಮೋಹಿನಿಯು ತ- ।
ನ್ನಿಲಯದೊಳು ಪೂಜಿಸುತ ಮದನನ ।
ಮುಳುಗುವರ್ಕನ ಪೊಗಳುತ್ತೈದಿರೆ ಭೃತನು ಮುದದಿಂದ ॥ ೧೨ ॥
ಇಳಿದು ಕೆಂಬಿಸಲಿನ್ನು ತಾರಾ ।
ವಳಿಯು ಕಾಣದ ಸಮಯದೀರ್ವರು ।
ಕಳೆಯುತಿರ್ದರು ಮಧುರಚಂಪಕವನವನಾಶ್ರಯಿಸಿ ॥
ಒಳಿತೆಲಾ ತಿಳಿಯದಲೆ ಜಗಕಿದು ।
ಬಳೆವುದವರಾ ಗೂಢ ಪ್ರೇಮವು ।
ತಿಳಿದಮೆ[3] ಭಂಗಿಸಲು ಕೇಳುವ ಶೋಕಕಥೆಗಿಂತ ॥ ೧೩ ॥

---

2. ಮಾತಾಡುತ್ತ. 3. ಪ್ರೇಮವಿತ್ತೆಂದು ತಿಳಿದ ಬಳಿಕ ಅದರ ಭಂಗದ ಸುದ್ದಿಯನ್ನು ಕೇಳಿ ದುಃಖಬಡುವುದಕ್ಕಿಂತ.

ಸುರಿಸುವುದು ಕಂಬನಿಯು ಸರಿಯೆ ।
ಸರಿಯೆ ಬಿಸುಸುಯಿದೆನ್ನುವುದು, ಹಾ ! ।
ಮರಣಕೆಡೆಯಾಗಿರಲು ಕಾಮುಕರವರ ಚರಿತ್ರವನು ॥
ನೆರಳುತ್ತಲೆ ಪೇಳುವುದು ಸರಿಯೆ ।
ಸರಿಯೆ ಇಲ್ಲವೆ ದೈನ್ಯತೋರ್ಪುದು ।
ಪರಮಸುಖಖನಿಯವರ ಜೀವಿತವಿರಲು ಲೋಕದೊಳು ॥ ೧೪ ॥
ಮಡಿದರೇನಹುದೆನಿಬ ವಿರಹಿಗ- ।
ಳಡಿಗಡಿಗೆ ಮೋಹಿನಿಯು ದುಃಖದ ।
ಬಡಲದೇನಹುದಿಲ್ಲವೇ ಭೃತನರಿಯದಿರೆ ಸುಖವ ॥
ಅಡಗಿಪುದು ತಾಪವನುರಾಗವು ।
ಗೊಡುವ ತಸು ಸೊಗವೆಂದು ತಿಳಿಯೈ ।
ಕಟುಕುಸುಮದಲಿ ಮಧುವ ಕಾಣೆಂದುಲಿವುದಾರಡಿಯು ॥ ೧೫ ॥
ತಂದೆ ಕೂಡಿಟ್ಟೆಲ್ಲ ಭಾಗ್ಯಕೆ ।
ಬಂದ ಮೋಹಿನಿಯಗ್ರಜರು ತಾ- ।
ವಿಂದು ಮಿಗಿಲಾದೆಳ್ಗೆಯನು ಪೊಂದಿರಲು ಸುಖದಿಂದ ॥
ನಿಂದು ಖಣಿಯಲಿ ಹೋರಿ ಮನೆಯಲಿ ।
ಮಿಂದು ನದಿಯಲಿಯುವರಿಗೋಸುಗ ।
ತಂದು ತುಂಬುವರವರ ಭಾಂಡಾರವನು ಸೇವಕರು ॥ ೧೬ ॥
ಕರಭಿಯನು ಮಾಳಗುವರು ಭೃತ್ಯರು ।
ಹರಿದು ಜೀವಿತದಾಶೆಯನು ಪರಿ- ।
ಪರಿಯ ಸೊಬಗನು ಬಡಿಸಲರಿ ರಕ್ತವನು ಸುಡುತಿಪರು ॥
ತರಲು ರುಚಿಯನ್ನವರ ಜಿಹ್ವೆಗೆ ।
ಜರಗುವುದು ಕಿಂಕರರ ಸಂಕುಲ- ।
ವರಿಯದನ್ನರು ಪೆಣಗುವದು ಬಳಿಸಿದರ ಲೌಲ್ಯವನು ॥ ೧೭ ॥

ತೆನುವ ದೊರಿರ್ದಧನವು ನಳಲೇ- ।
ನೆನಿತು ಬಳಲ್ದು*ಳುಗಳು ದುಡಿತದಿ ।
ಕೊನೆಯ ಕಂಡೊಡೆ ಪೋಪುದೇನ್ನೈ ಸ್ವಾಮಿ ಜನಮದವು ॥

ಧನಿಕರಾದಾ ಸೋದರಂದಿರು ।
ಕನಕಲೋಭದಿ ಮರೆತು ಮಮತೆಯ ।
ನೆನೆಯದಾದರು ಗೌರವವ ಮದದಸರದಲಿ ದಿಟವು ॥ ೧೮ ॥

ಸಿಡಿದು ಪುರಜನರಿಂದಲವರೊ೩- ।
ಸೆಡವಿಸಲಿ ತರ ತರದ ಭೀತಿಯೊ- ।
ಳಡವಿಯಂನು ಭಜಿಸಿದರು ಗೂಬೆಗಳಂತೆ ಹೊದರನ್ನು ॥

ಸುಡುವ ಕಾಡಿನ ಹದ್ದಿನಂದದಿ ।
ನಡುವು ಬಾಗಿದ ಕತ್ತೆಗಳಂತೆಯೆ ।
ತೊಡಕಿದರು ಜನನಿಂದೆಗೈ ಪರಧನವ ಸೆಳೆಸೆಳೆದು ॥ ೧೯ ॥

ಕಾಸು ಕಾಸಿಗೆ ಲೆಕ್ಕವೆನ್ನುವ ।
ಜೇಸಿ ಸೋದರರಿಂತು ಕಂಡರೊ ।
ಮೀಸಲಿದ ಮೋಹಿನಿಯ ಪ್ರೇಮವ ಭೃತನ ಮನನವನ್ನು ॥

ಕೇಸುರಿಯ ಮೊಗ ರಾಸೆ ಜುರುಕರು ।
ಗಾಸಿಮಾಡಿದುದೇನು ಪೊಸತೈ ।
ದೊಸರವು[4] ಸಲೆ ಕೆಡಿಸಲಾರದ ಗತಿಯು ಜಗದುಂಟೇ ॥ ೨೦ ॥

ಮನವರಿತರಣ್ಣಂದಿರೀರ್ವರು- ।
ಮನುಚಿತದ ಮೋಹಿನಿಯ ರಾಗವ ।
ಕನಲಿದಪು ಕಂಡದುವೆ ಸಿಲುಕಿದುದನ್ನು ಭೃತನಲ್ಲಿ ॥

---

4. ಸ್ವಾರ್ಥವು.

ಅನುಜಳನು ಕೊಟ್ಟೋರ್ವ ಧನಿಕಂ- ।
ಗಿನಿದುಗೈಯಲು ಬಯುವ ಭರದೊಳು ।
ನೆನೆದವನು ಕಡು ಹೊಟ್ಟೆಯುರಿಯಿಂ ಭ್ರಾಂತರಾಗುವರು ॥೨೧॥
ತುಟಿಯು ಕಚ್ಚುವರೊಮ್ಮೆ ಬಟ್ಟೆನು ।
ಚಟ ಚಟನೆ ಮುರಿದೊಮ್ಮೆ ಹಲ್ಗಳ ।
ಕಟ ಕಟನೆ ತಿನ್ನುತ್ತ ಪಟ ಪಟಿಸುವರು ತಮ್ಮೊಳಗೆ ॥
ಶತನಿಗುಣಿಸುವೆನವನ ತಾಪವ ।
ದಿಟವೆನುತ ಬದಿಗೊತ್ತಿ ಮಾಯೆಯು ।
ಛಟ ಛಟಿಸಿ ಸುಡಲವನ ಕಾಡೊಳು ಝುಟಿಪರೇಂ ಪೇಳ್ವೆ ॥ ೨೨ ॥
ಒಂದುದಿನ ಮುಂಜಾವಿನಲಿ ಭೃತ ।
ವಂದಿಸುತ ನಿಂತಿರಲು ರವಿಯುಸು ।
ಬಂದರಾ ಘಾತಕರು ಅವನಿದ್ದೆಡೆಗೆ ತೋಟದೊಳು ॥
ಪೊಂದಿದಂತಿರೆ ನೀನು ತೃಸ್ಸ್ಯ- !
ನಂದವನು, ಭೃತ, ಅವನು ಕೆಡಿಸಲು ।
ನೊಂದೆವಾದರು ಏನು ಕುದುರೆಯು ನೀಗಲೇ ಜಾಣ ॥ ೨೩ ॥
ಬೆಳಗುಹರಿಯುವ ಮುನ್ನ ಯೋಜನ ।
ಗಳಿದು ಸಾಗಲು ಮೂವರಿಗೆ ಬಲು ।
ಬೊಳಿಕೆಲಾ ತೀರಿಯಿದನುಮೆನೆ ಭೃತ ನಂಬಿದನು ಮತ್ತೆ ॥
ಬಳುಕಿ ಬಾಗುತ್ತೆ ನಮಿಸಿ ಹಾಲಾ ।
ಹಲದಿ ಪುಟ್ಟಿದ ಹಾವುಗಳಿಗುತೆ ।
ಘಳಲನಸುವಾಗಲ್ಕೆ ಹಿಡಿದನು ಕೋಲುಕಡಿವಾಣ ॥ ೨೪ ॥
ಏರಿ ಸಾಗಿದನಂಗಣಕೆ ಭೃತ ।
ಮೂರು ಮೂಲೆಗೆನೊರಗಿ ನೋಡುತೆ ।
ನಾರಿ ಮೋಹಿನಿಯುದಿಸು ಗಾನವು ಸೂಪ್ರವದ ರವವು ॥

ಜಾರಬಹುದೇ ಕಿವಿಯೊಳೆನ್ನುತೆ ।
ಬಾರಿ ಬಾರಿಗೆ ಚಿಂತಿಸುತ್ತಿರೆ ।
ದೂರದೊಳ್ನೋಡಿದನು ಹರುಷದಿ ಮೋಹಿನಿಯ ಮುಖವ ॥೨೫॥

ನಲಿದು ಭೃತ ನಸುನಗುತಲಾಕೆಯ ।
ಕೆಲವ ಸಾರ್ದನು ಮೆಲ್ಲ ಮೆಲ್ಲನೆ ।
ಉಲಿದನತಿ ದುಃಖದಲಿ ಕಾಂತೆಗೆ ಪಯಣಸುದ್ದಿಯನು ॥

ಎಲಗೆ ನಿನ್ನನು ತೊಲಗಿ ಪೋಗುವ ।
ಕಲಿಯ ಕಾಲಕೆ ನಿನ್ನ ನೋಟವು ।
ನಿಲುಕುವುದೆ ನನಗೆಂದು ಜೆಂದೊಡಮೀಗ ಮುಂದರಿವೆ ॥ ೨೬ ॥

ಗಳಿಗೆ ಮರೆಯುವಿಯೋಗ ದುಃಖವ- ।
ದಿಳೆಯೊಳಗೆ ದುಸ್ಸಹವು ತಾನಿರೆ ।
ಕಳೆವುದೆಂತಿನ್ನಖಿಲ ಕಾಲವ ನೀನು ದೂರಾಗೆ ॥

ಕಳೆವು ಗಡ ಸಂಶಯದ ಕತ್ತಲೆ ।
ಸೆಳೆಯುವಾ ನಾವ್ ಸುಖದಸೂರ್ಯನ- ।
ನುಳಿಯೆ ನೀನಿಲ್ಲೆಂದು ಭೃತನೆನೆ ಮುದದಿ ತಿರುಗಿದಳು ॥ ೨೭ ॥

ಘಾತಕರು ನರಬಲಿಯ ವಿಷಯಕೆ ।
ಕಾತರವ ಬಡುತಿರಲು ಭೃತನತಿ ।
ನೂತನನುರಾಗಾನುಭವಹರುಷವನು ಪೊಂದಿದನು ॥

ವೀತಿ[5]ವೇಗಕೆ ಹಿಂದೆ ಜಾರುವ ।
ಭೂತಲದ ಸೌಂದರ್ಯಸಕಲವ ।
ಕೌತುಕದಿ ಭೃತ ನೋಡಿ ಹಿಗ್ಗುವನವರು ಬಾಡುವರು ॥ ೨೮ ॥

5. ಕುದುರೆ.

ಯೋಜನವ ಹಿಂದೂಡಿ ಪೊಕ್ಕರು ।
ಮೂಜನರು ನಿಬಿಡಾದ ಕಾಡನು ।
ಗೋಜನರಿಯದ[6] ಭೃತನ ಕೊಂದರು ಕಪಟಸೋದರರು ॥
ವಾಜಿದಳಿಯನು ತೊಳೆದು ನೀರೊಳು ।
ವಾಜಿಯನು ತವಕದಲಿ ಹೊಡೆದರು ।
ಸೋಜಿಗವ ಬಡುತ್ತೈದೆ ನೀಚರು ಮನೆಯ ಹಾದಿಯಲಿ ॥ ೨೯ ॥

ಭೃತನ ಸೌಖ್ಯದ ಚರಿತವಿಂತೀ ।
ಕೃತಿಯೊಳಂತವ ಪೊಂದಲವನಿಗೆ ।
ಸೃತಿಯು ಬಂಧವು ಗತಿಸಿದಕೆ[7] ಸದ್ಗತಿಯ ಸುಖಮುಂಟೇ ॥
ಭೃತನುಳಿದು ಸೋದರರು ಬಂದಿರೆ ।
ಕ್ಷಿತಿದಳಿದ ಮೋಹಿನಿಯು ಶಾಂತಿಗೆ ।
ಪಿತಭವನು ಪೇಳಿದರು ಪೋಗಿಹನೆಂದು ಪರಪುರಕೆ ॥ ೩೦ ॥

ಒಡೆಯನನು ನೀಂ ನೋಡುವಾಸೆಯ ।
ಗೊಡವೆಯನು ಬಿಡು ಬಡವೆ ಮೋಹಿನಿ ।
ತೊಡು ನಡಿಯೆ ನೀಂ ವಿರಹವೇಷವ ನಾಳಿಯೆಂದೆನವೆ ॥

ಕಡುವೆ ಹಳಹಳಗೈದು ಶೋಕವ ।
ತಡೆದಳವಳಾದಿನದ ಹಗಲೊಳು ।
ಕಡೆಗೆ ಭೃತನಾಶೆಯನು ತೊಲಗುತೆ ಸೊಗವ ದೂಡಿದಳು ॥ ೩೧ ॥
ರಮಣನನು ನೋಳ್ಪಂತೆ ಯಾಕೆಯು ।
ತನುದೊಳವನನು ನೆರಳಿ ಕರೆಯುತೆ ।
ಮನುತೆಯಲಿ ಕರವನ್ನು ಚಾಚುತ್ತವಚುವಳು ಮರುಳೆ ॥

---

6. ಕಾರಣವನ್ನು. 7. ಸಾಯಲಾಗಿ.

ನಿಮಿಷವೊಂದಕೆ ತನ್ನ ವಿಷಯ– ।
ಭ್ರಮವ ಹರಿದಳು ಮನದಿ ಧರಿಸಿ ।
ಭ್ರಮಣದಲಿ ಕಾಂತಂಗೆ ಸುಖವಿಲ್ಲೆಂಬ ಕಲ್ಪನೆಯ ॥ ೩೨ ॥
ವನಿತೆ ದಿನದಿನದಲ್ಲಿ ನವೆದಳು ।
ಕೊನೆಗೆ ರೂಪವು ವಿಕಲವಾಯಿತು ।
ಬನಸಿರಿಯು ಬರಲಾಗುವಂತೆಯೆ ಚಳಿಯಕಾಲಕ್ಕೆ ॥
ಮನದೊಡೆಯನು ಭೃತವನಾಸವಾದರು ।
ಮನೆಗೆ ಬರದಿರೆ ಸೊರಗಿದಬಲೆಯು ।
ವಿನಯದಿಂ ದೂರಿದಳು ನಗೆತಂದಳುವ ಮೊಗದಲ್ಲಿ ॥ ೩೩ ॥
ಮರಳಿ ಬಾರನು ಅಣ್ಣಗಳಿರಾ ।
ಪರಮ ಸೇವಕನಿನ್ನು ವರೆಗಂ ।
ಪಿರಿದುದೆಂತುಜ್ಜುಗವು ತರಬುವುದವನ ಬರುವಿಕೆಯ ॥
ಮೊರೆಯನಿದನಾಲಿಸದೆ ದುಷ್ಟರು ।
ಹರಡಿಪರು ಕಡುಪುಸಿಯ ಜಾಲವ ।
ಮರುಗುವರು ಸೋದರಳ ಬಾಳ್ವಿಗೆ ಬೆದರಿ ತಮ್ಮಘಕೆ ॥ ೩೪ ॥
ಸೋದರಂದಿರ ಕಾಕುಕಾರ್ಯದ ।
ಬೋಧವಿರದಳಿದವಳೆ ಮೋಹಿನಿ ।
ವಾದವಿಲ್ಲದೆ ಘೋರವಾದಾ ನೋಟವನು ಬಿಡಲು ॥
ವೇದನೆಯ ಬೇನಿಪ್ಪನರಿಯಲು ।
ಕಾದವವನಿಗೆ ಖಡ್ಗವಿರಿಯಲು ।
ಆದಮೂತನೆ ಯಡಗಿಪಂತೆಯೆ ನೊಂದಳಾ ಬಾಲೆ । ೩೫ ॥
ಕರಪುಗುಂಪಿದ ಕೂದಲೊಂದಿಗೆ ।
ನೆರೆಗಟ್ಟಿದ ತುಟಿಗಳೊಂದಿಗೆ ।
ತೊರೆದ ಮಾಧುರ್ಯವನು ತೋರಲು ದಣಿದ ದನಿಗೂಡಿ ॥

ಸುರಿವ ಕಂಬನಿಯಿಂದ ಕೆಂಪೇ- ।
ರಿದಲು ತೆರೆದಾ ಕಣ್ಗಳೊಂದಿಗೆ ।
ಬರುವ ಭೃತನಾಕೃತಿಯ ಕಂಡಳು ನಿದ್ರೆಯಲಿ ತರುಣಿ ॥ ೩೬ ॥
ಬಂದ ಭೂತವು ಕಥಿಸಿತವಳಿಗೆ ।
ಸಂದ ತನ್ನಯ ಕೊಲೆಯ ವಾರ್ತೆಯ ।
ಕೊಂದ ಸೋದರರರಂತರಂಗದ ಕಹಿಯ ಹೊರಗೆಡವಿ ॥
“ ಚೆಂದದಿಂ ಮಲಗಿಹೆನು ಮೋಹಿನಿ ।
ಬೆಂದು ಬೂದಿಯ ಪರಿಯೊಳಿನ್ನುಂ ।
ಸುಂದರಿಯೆ ಬಂದೊಂದು ಕಂಬನಿಯಿಂದೆ ತಂಗೈಸೆ ” ॥ ೩೭ ॥
“ ಅಕಟಕಟ ನಾಂ ಗಾಳಿಯಾದೆನು ।
ಮುಕುತಿಯಾಯಿತು ಜೀವಕೋಟಿಯ- ।
ದಖಿಲವನವದು ಕೀಸರುಡುತಿರೆ ಭಜಿಪೆ ಮೌನದಲಿ ॥
ವಿಕಚ ಪುಷ್ಪವು ಪೂರ್ಣಚಂದ್ರನು ।
ನಿಕಟ ದೇವಾಲಯದ ಗಂಟೆಯು !
ಪ್ರಕಟ ಮಾಳ್ಪುವವೆನ್ನ ಗೋಳನು ನಾವು ಜೀರಿಡಲು ” । ೩೮ ॥
“ ಗತಿಸಿದನು ನಾಂ ಬಲ್ಲೆ ನಡೆವುದ ।
ಶ್ರುತಿಸಬಲ್ಲೆನು ಮೂಢನೆನಿಸದೆ ।
ಸತಿಯೆ ಭೌತಿಕ ಸುಖವು ಮರೆತರು ನೀನು ಸುಖಗೊಡುವೆ ॥
ಮೃತಿಯು ಕೆಡಿಸುವ ನಿನ್ನ ತನುಕಾಂ- ।
ತ್ಯತಿಶಯವದಪ್ಸರೆಗೆ ಬಾರದು ।
ಕೃತಕವಲ್ಲಿದು ನೀನು ಶೃಂಗಾರಾಧಿದೇವತೆಯು ” । ೩೯ ॥
ಹೇಳುವುದು ಮುಗಿಯುತಲೆ ತೆರಳಿತು ।
ಗಾಳಿಯಾಯಿತು ಕಂಡ ಭೂತವು ।
ತಾಳದಂಜಿಕೆಯಿಂದಲೆದ್ದಳು ಚೆಲುವೆ ಮೋಹಿನಿಯು ॥

ಬೀಳಗೆಡಿಸುವ[8] ಹಾಳು ಬಗೆಯಲಿ ।
ಕಾಲವೆಲ್ಲವ ಕಳೆದು ನಿಶೆಯೊಳು ।
ಜೀಳಿ ಹಾಸಿನ ಮೇಲೆ ಕಾಣುವ ಕನಸಿಗಗಿದಂತೆ[9] ॥ ೪೦ ॥

"ಏನುಗತಿಯಿದು ಪ್ರಾಣನಾಥನೆ ।
ದೀನರೊಳು ನೀಂ ದೀನನಾದ್ಯೆ ।
ಹೀನವಿಧಿಯಾಟವದು ಭೃತನ ಪಯಣವು ಸರಿಯಾಯ್ತು ॥
ದಾನವದ್ವಯದಾಟವೆಂದಿದು ।
ನೀನು ಕಣ್ಬಿರೆಸಿರಲು ನಿನ್ನಯ ।
ಕಾನನದಿ ನಿಜದಶೆಯ ಶೋಧಿಪೆನೆಂ" ದಳಾ ಬಾಲೆ ॥ ೪೧ ॥

ಕಾಡಿಗೋಡುವ ಕಳುವ ಮುಚ್ಚಲು ।
ಕಂಡ ಕನಸಿನ ನಿಜವ ತಿಳಿಯಲು ।
ಮುಂಡಿಸಲು ಬಲುಬೆಲೆಯ ಬೂದಿಯ ಗೈದು ನಿಶ್ಚಯವ ॥
ಕೂಡಿ ಮುದಿಹೇಂಗಳೆಯು ನಡೆದಳು ।
ಮಾಡುತಲಿ ಶೋಧನೆಯ ಕಷ್ಟದಿ ।
ನೋಡಿದಳು ಸಂಜೆಯಲಿ ತನ್ನಯ ಭೃತನ ಶೇಷವನು ॥ ೪೨ ॥

ತಲೆಯ ಬುರುಡೆಯು ಕಾಲು ಕೈಗಳ- ।
ನೆಲುವುಗಳನುಳಿದಿರ್ದ ಪಕ್ಕದಿ ।
ಹೊಲಸರಿವೆ ಹೆಣವಾಣ ಹುರಿ ಸಿಡಿಗೆಗಳ ಮಡಿಕೆಗಳ ॥
ಎಳೆಯಿದೆಯ ಬಾಲಕರು ಕಂಡರೆ ।
ಹಲಬುದೆಲ್ಲವು ತಿಳಿದು ನೋಡಲು ।
ಕಲಮಧುರ ಗಾನವಲೆ ಮೋಹಿನಿ ಶೋಕವೆಂತಹದೊ ॥ ೪೩ ॥

---

8. ಬಳಲಿಸುವ. 9. ಬೆದರಿದಂತೆ.

ನೋಡುತಲಿ ಮನಗಂಡು ಪಾಪಿಯು ।
ದೂಡಿ ಬಳಸಿರ್ದೆಲ್ಲ ದುಃಖವ ।
ಕೂಡಿ ಕಣ್ಗಳ ಹುಡುಕಿದಳು ಹೂಳಿಟ್ಟ ಜೀನನವೊಲ್ ॥
ಮೂಡುತಲಿ ಆ ಸ್ಥಾನ ಮಹಿಮೆಯು ।
ಕಾಡಿನೊಳು ಬೆಳೆದಿರ್ದ ಪೂವೆನೆ ।
ಕಂಡಳಲ್ಲವೆ ಬಾಲೆ ಅರಳಿದ್ದಮಿತ ರುಚಿಯೊಡೆದು ॥ ೪೪ ॥
ಕಟ್ಟೆ ಸೇಗಸು ಟೊಂಕಸುತ್ತಲೆ ।
ಸಟ್ಟೆ ಭೃತನಸ್ಥಿಯನು ಹುಡುಕುವ ।
ದಿಟ್ಟೆ ಮೋಹಿನಿಯುಳಿಗೆ ಸಿಟ್ಟು ಸಿರಿಟ್ಟಳಾದಾಸಿ ॥
ಅಟ್ಟೆ ಭಂಗಿಮಾಯೆಗಳನೀರ್ವರು ।
ಒಟ್ಟಿದರು ಶ್ರಮಬಟ್ಟು ಸಕಲವ- ।
ನಟ್ಟಹಾಸವ ತೋರುವಂತಿರೆ ನಷ್ಟಕಾರ್ಯದಲಿ । ೪೫ ॥
ಶ್ರಮವಿಪಾಕವ ಕಂಡು ತರುಣಿಯು ।
ಬೆಮರಿ ಬಾಯಾರೊರಗಿ ಭೂಮಿಗೆ ।
ಯಮುನೆವೊಲು ನೀರಾಗುವಂತಿರೆ ರೋದಿಸಿದಳಕಟ ॥
ಅಸುರನಿಲ್ಲದ ಹಾಳುದೇಗುಲ ।
ಸಮವೆನಿಪ ಭೃತನಂಗಶೇಷಕೆ ।
ನಮಿಸುತವನಾ ಪ್ರೇಮದಕ್ಷಯುವನ್ನು ಸಮನಿಪಳು । ೪೬ ॥
ಶಿರವನುಳಿದೆಲ್ಲವನು ಬಳಿಂತಿರೆ- ।
ಳೊರಗಿಸುತೆ ಭೂದರದಿ ಭರದಿಂ ।
ತಿರುಗಿದಳು ಮನೆಗಂದು ತಂದುದ ಮುಚ್ಚಿ ಕಾಯಲ್ಕೆ ॥
ಭರದಿ ಸೇರುತ ತನ್ನ ಸದನವ- ।
ನಿರಿಸಿದಳು ತಂದುದನು ಹಿತದಿ ।
ಹಿರಿದ ಮನ್ನಣೆಯಿಂದ ನೆನೆಯುತ್ತವನ ಜೊತೆಯನ್ನು ॥ ೪೭ ॥

ಸರಸಪರಿಮಳ ಗಂಧಗಳ ತೀ- ।
ಡರಪಿಸುತೆ ಕುಸುಮಗಳನಾಶಿರ- ।
ಕೆರಗಿ ಸುಪ್ರೇಮದಲಿ ವಿಧಿಸಿದಳದಕೆ ವಿಶ್ರಮವ ॥

ಮರುಳಬಾಂಧವರರಿಯದಂತೆಯೆ ।
ನೆರೆಯೊಳಡಗಿಸಿ ಶಿರವನಲ್ಲಿಯೆ ।
ನಿಲಿಸಿದಳು ಚೆಲುವಾದ ವೃಂದಾವನವ ಮೋಹಿನಿಯು ॥ ೪೮ ॥

ಪರಿ ಪರಿಯೊಳನುದಿನವು ದೊರೆಯುವ ।
ಕರುಣ-ಶಿಶು-ಮೋಹಿನಿಯ ಕಂಬನಿ ।
ಜರೆಗೆ ಜಿಳಿದಿತು ಮಧುರ ತುಲಸಿಯು ಚಂದ್ರಕಲೆಯಂತೆ ॥

ಮರೆತಳ್ಕೆ ಕಾಲಾನುಕಾಲಕೆ ।
ಧರೆಯ ಸೌಂದರ್ಯದ ವಿಲಾಸವ ।
ತೊರೆದಳಯ್ಯೋ, ನೀರೆ, ರವಿಶಶಿಸ್ಮರಣವನು ಕೂಡ ॥ ೪೯ ॥

ಇರುವುದೇಯೊಳಿತೆಂದು ಭಾವಿಸಿ ।
ಸೊರಗಿ ಸಾಯುವ ಮೋಹಿನಿಯ ಗತಿ ।
ಯರಿಕೆ ಸಾಕೆಂದೋಸರಿಸದಲೆ ಅಯ್ಯ ಚಿತ್ತೈಸು ॥

ಸುರಿಸುರಿದು ರಕ್ತವನು ಕೊಬ್ಬಿದ ।
ಹರಿಯು ಶೋಣಿತ[10]ದಂಷ್ಟ್ರನೆಡಹಿದ ।
ಸುರಭಿಯೂವಸ್ಥೆಯನು ಚಿಂತಿಸೊ ಗಟ್ಟಿಮನನೂಡಿ ॥ ೫೦ ॥

ಸ್ಮರಿಸೆಲೆ ಸಂತಾಪವಹ್ನಿಯೆ ।
ಮರ ನಡೆ ವೈಷಾದರಾಗವೆ ।
ತೆರೆರೆ ಮನವೇ ಹೇಗಲಾಪರು ಸಹನಕವಚವನು ॥

10. ಕೆಂಪು.

ಸ್ವೈರಸುಖಜೀವಿಗಳಿ ರಮಿಸಿರಿ ।
ಬೀರಿರೆಂತುಂ ಸ್ಮಿತದ ಭಾಸವ ।
ಚಾರುಮೋಹಿನಿ ಮೀರಿ ಕೈಯನು ಪೋಪಳಿನಿತರೊಳು ॥ ೫೧ ॥

ನೋಡಲ್ಸುಂದರ ಪಾರಿಜಾತದ್ರುಮಮಂ ಸೌರಭ್ಯಮಂ ತೀಡುವಾ ।
ಕೊಂಡಾಡುತ್ತಲದಂ ವಿಹಾರಿಜನಗಳ್ ಮುಂಡಾಡೆ ಪುಷ್ಪಂಗಳಿಂ ।
ಜೋಡಾಗಲ್ಲಿ ತೊಡರ್ವವೇ ಹತಕೃಪಾಭ್ರಾತೃದ್ವಯಂ ಜೀವದಾ ।
ಗೂಢಾಧಾರವ ಖಂಡಿಸಲ್ ಜಗಿಪಳೇಂ ಕಾಂತಾಮಣೀ
ಮೋಹಿನಿ ॥ ೫೨ ॥

ಭೂಪಾಲರ್ನೆರೆ ಮೆಚ್ಚುವಂತೆ ಸೊಗಸಾ ಲಾವಣ್ಯಮುಂ ರೂಪಮುಂ ।
ಪೆಂಪಂ ಜೌವನಮನ್ನು ತಾಳ್ದ ಯುವತೀಕಾಂತಾರಜೋತ್ಸ್ನಾವಲಿ ॥
ಪಾಪಕ್ಕೊಡ್ಡಿರುವಂತೆ ಕುಂದುತಿಹಳೇಕೆಂದಂಜೆ ಪೌರಂಧ್ರಿಯರ್ ।
ಕೋಪಂ ಸೆರ್ಚಿದುದಿತ್ತ ಬಾಂಧವರೊಳಾ ನೀರ್ಗಣ್ಣಿನಾ
ತಂಗಿಯೊಳ್ ॥ ೫೩ ॥

ಈ ವೃಂದಾವನಮೇನು ಮತ್ತಮದರೊಳಂ ಚೆಲ್ವಾಗಿ ಪುಟ್ಟಿರ್ದುದೇಂ ।
ಸಾವೊಂದಾಗಿರೆ ತಾನು ಕಂಬನಿಗಳಂ ಸೂಸುತ್ತೆ ಕುಳ್ಳಿರ್ದುದೇಂ ॥
ಜೀವಂ ಬೇಸರವಾದುದೇಕೆ ಭೃತನೇಂ ಕಾಣ್ಬಲ್ಲನೇ ಸಿದ್ರೆಯೊಳ್ ।
ಸರ್ವಂ ತೋಚದಿರಲ್ ದುರಾಗ್ರಹಿಗಳೇಂ ಪೇಗಾದರುಂ
ಕಾಡುವರ್ ॥ ೫೪ ॥

ಜೀವಂ ಮೋಹಿನಿಯುಳ್ಳೆಯೊಡದ ಗಿಡಮುಂ ಕೊಟ್ಟಲ್ ಕೃಶೋ
ದಾಯರು ।
ಕಾವರ್ಕಾಲವನಂ ವೃಥಾ ಭೃತಸತೀ ದೇವಾರ್ಚನಾಭ್ರಷ್ಟೆಗೆ ॥
ಸನ್ಮಾರ್ಗೈಕೆಯು ದೇಹಮುಂ ಜರೆಯುತಾ ವೃಂದಾವನಸ್ಥಾನದೊಳ್ ।
ಸೇವಾತತ್ಪರಳಾದಳಾಕೆ ಮಸಗಂ ಕಾಣೀವುದೆಂಬಂತೆ ದರ್ ॥ ೫೫ ॥

ಹೇಗೋ ಕದ್ದರು ಮೋಸದಿಂ ತುಲಸಿಯಂ ಕಂಡರ್ಭಯಾ
ಶ್ಚರ್ಯದೊಳ್ ।
ಬೇಗಾಡಂಬರದಲ್ಲಿ ಪಲ್ಲವಿಸುವಾ ಪಾಂಗಂ ದಯಾದ್ರೋಹಿಗಳ್ ॥
ಭಂಗಂ ಬಂದೊಡೆ ತಮ್ಮ ಗುಟ್ಟುಗುಮುವರ್ಜಾರೆತ್ತಕಾಲೂರ್ದರೊ ।
ತಾಂ ಗೋಳಾಡಿದಳಿತ್ತ ಮೋಹಿನಿ ನಿಜಾಧಾರಂ ದುರಾಪಾಗಲು । ೫೬ ॥
ಕಾರ್ಮೋಡಂಗಳ ಚಾತಕಂ ಬಯಸಿ ತಾಂ ಬೆಂಡಾಗಿ ಶುಭ್ರಾಭ್ರಮಂ ।
ಕೂರ್ಮಿಂದಂ ನೆರೆ ನೋಡೆ ವಜ್ರಿಗುದನಂ ಚೆಲ್ವಾಗಿ ನುಣ್ಮಾಡಿದಂ ॥
ಊರ್ಮಿಂದಿನ್ನಳಲೇನು ಮೋಹಿನಿಯಳಂ ಕಾಯ್ಬಲ್ಲರೇ
ಧಾತ್ರಿಯೊಳ್ ।
ಧರ್ಮಂ ಸಲ್ಲದ ಗೋಳಿ ರೋದಿಸಿದರೇಂ ಕಾಂತಿಃಬೆ ತಾಂ
ರಂಜಿಸಂ ॥ ೫೭ ॥

11 ಈಶಾರಾತಿಗೆ ಕಣ್ಗಳಂ ಹಸಿತಮಂ ದೇವರ್ಗೆ ಭಾಳಾಂಕಮಂ ।
ಸೇಸರ್ಗಂ ಸುರ ಮೋಹಿಸೇಕರತಲಕ್ಕಾರಮ್ಯವಕ್ಷೋಜಮಂ ।
ಶ್ರೀ ಬೌರೀಪ್ಸಿತ ನಾಭಿಜಕ್ಕೆ ಕಟಿಯಂ ಸಗ್ಗಾನೆಗಂ ಶ್ರೋಣಿಯಂ ।
ಸುಸೇವ್ಯಾಂಘ್ರಿಸರೋಜದಾ ಯುಗಲಮಂ ಶ್ರೀದೇವಿ
ಗಿತ್ತಳ್ಕಣಾ । ೫೮ ॥

12 ವಾರಂವಾರನಡರ್ಗ ಭೂಧರವನಂ ಸಣ್ಣಾದ ಚಂದ್ರಂಗೆ ನಾಂ ।
ಪೂರ್ತ್ರಿಪೆಂ ನಿಜದೇಹಮೆಂದೊಲವಿನಿಂ ಕೊಟ್ಟಿರ್ದಡೇ ಗೈದೆಯೋ ॥

---

11. ತನ್ನ ಪ್ರತಿಯೊಂದು ಅಂಗವನ್ನೂ ಮೋಹಿನಿಯು ಬೇರೆ ಬೇರೆ ದೇವರಿಗೆ ಯೋಗ್ಯವಾಗುವಂತೆ ಕೊಟ್ಟುಬಿಟ್ಟಳು; ಆದ ಕಾರಣ ಮದನನಿಗೆ ಅವಳ ಕಣ್ಣುಗಳು ಹಂಚಿಹೋದುವು; ಅದನ್ನೇ ಅವನು ಬಾಣದಂತೆ ಉಪಯೋಗಿಸಹತ್ತಿದನು. ಇತ್ಯಾದಿ. 12. ತನ್ನ ಪಾಲಿಗೆ ಬಂದುದನ್ನು ಚಂದ್ರನು ಕಳೆದುಕೊಳ್ಳಲಾಗಿ ಪೃಥ್ವಿಯು ಅವನಿಗೆ ತನ್ನ ಪಾಲಿಗೆ ಬಂದ ಕಾರುಣ್ಯವನ್ನು ಕೊಡಹೋದಳು. ಈ ಪ್ರಕಾರ ಮೋಹಿನಿಯ ಬಗ್ಗೆ ಶೋಕವು ಜಗತ್ತಿನಲ್ಲೆಲ್ಲ ಹಬ್ಬಿಕೊಂಡಿತು.

೪೪. ಮೋಹಿನೀವಿರಹ.

ಜೇರೆಂದಂ ಬಡಮೋಹಿನೀಯುಲರಿಯಳ್ ಕೈಕೊಳ್ಳ

ನಾಂ ಪೊಂದಿದಾ ।

ಕಾರುಣ್ಯೈಕವನೊಂದಲಾಗಿ ಜಗಂ ಗೋಳಿಟ್ಟುದೇಂ ಪೇಳಲಿ।೫೮॥

ಈ ಲೋಕವೇ ಪ್ರಣಯಘಾತಕವೆಂಬ ಭಾವಂ ।

ತ್ರೈಲೋಕವಂ ಚಕಿಸುವಂತೆ ವಿನಷ್ಟನಾರಿ ॥

ಸಲ್ಲೀಲೆಯಿಂ ಜಿರೆಸಿ ಸಗ್ಗದಿ ಗಂಡನಂ ತಾಂ ।

ಮೇಲಾದಳೈ ಯಮನಿಗಂಜದ ಬಾಲೆಯಳ್ಗೆ । ೬೦ ॥



## ದ್ವೇಷಭಾಂಡಾರ ನಾಟಕದೊಳಗಿನ ಪದಗಳು.

ರಾಗ ಯುಮನ. ತಾಳ ತ್ರಿತಾಳ. “ ಟಕಮಕ ಪಾಹಿ ” ಎಂಬಂತೆ.

ಜಯ ಜಯ ವೀರಾ ಶೂರಶರಭ ಜಯ ವೈರಿವೀರ್ಯಹರ ।

ಕಾರ್ಯಧುರೀಣ ಪರಮದಯಾಳು ರಾಯ ರಾಯ ಬಾ ॥ ಪ ॥

ನಯವಿದಾಕಾರಾಲಂಕಾರ ರಾಜಗುಣಸಾರ ।

ಭಾಗ್ಯಶಾಲಿ ಪ್ರಾಣಕಾಂತನೆ ಬಾ ॥ ೧ ॥

ರಾಗ ಖಮಾಜ ಜಿಲ್ಲಾ. “ ಲಾವಿ ಚಟಕ ಗುಣಗಾನಾ ” ಎಂಬಂತೆ.

ಪ್ರಿಯಾ ಇರಲಿ ದೃಢಧಾಮ। ಜಯಧಾಮ ॥ ಪ ॥

ನವಯುವತಿಗೆ ಧವ– । ನವಾನುಭವವಿಹ ।

ಜವಗೇದಿತನವು ಬೇಡ । ೧ ॥ ಜಯಧಾಮ ।

ತವುವನು ಪೊಡಲೊಳು । ಸೆನುನಿಸಿ ವಾಸರ ।

ರಮಣೀಯಕನಿನನಿಂದೆ ॥ ೨ ॥ ಜಯಧಾಮ ।

## ೧೦.

# ಯಜ್ಞಕುಂಡ.

[ ಸನ್ ೧೯೨೪ ನೆಯ ವರ್ಷ ಬೆಳಗಾವಿಯಲ್ಲಿ ನೆರೆದ ರಾಷ್ಟ್ರೀಯ ಮಹಾಸಭೆಯನ್ನು ನೋಡಲಿಕ್ಕೆಂದು ನನ್ನ ಮಿತ್ರರಲ್ಲಿ ಅನೇಕರು ಹೋದರು; ನನಗೂ ಹೋಗಲಿಕ್ಕೆ ಆಗ್ರಹಮಾಡಿದರು. ಆದರೆ ಕೆಲವು ಕಾರಣಗಳ ಮೂಲಕ ನನಗೆ ಹೋಗುವುದಾಗಲಿಲ್ಲ: ಮನಸ್ಸಿಗೆ ಅತ್ಯಂತ ಖೇದವಾಯಿತು. ಕಾಂಗ್ರೆಸ್ಸನ್ನು ನೋಡದಿದ್ದರಿಲ್ಲ ; ಅದರ ಧ್ಯಾನವನ್ನಾದರೂ ಮಾಡಿ ತೃಪ್ತನಾಗಬೇಕು ಎಂಬ ಉದ್ದೇಶದಿಂದ ವಿಚಾರಮಾಡತೊಡಗಿದೆನು. ಆಗ ಈ ಕವಿತೆಯ ಜನನವಾಯಿತು. ಇದರಲ್ಲಿ ನಾನು ನನ್ನ ಚಿತ್ತಕ್ಕೆ ವ್ಯಥೆಗೊಡುತ್ತಿದ್ದ ವಿಷಯಗಳನ್ನೆಲ್ಲ ಸೇರಿಸಿರುವೆನು. ಜಗತ್ತಿನಲ್ಲಿ ಎಲ್ಲ ಕಡೆಗೂ ನೆಲೆಗೊಂಡ ಪಾರಮಾರ್ಥಿಕರಹಿತವಾದ ಔದಾಸೀನ್ಯಯುಕ್ತ ಜೀವನಕ್ರಮ, ನಿರ್ಧರ್ಮ-ಬುದ್ಧಿ, ವಿಷಯಭೋಗಲಾಲಸೆ, ಅಂತರ್ನಿರೀಕ್ಷಣೆಯಿಲ್ಲದೆ ಇಂದ್ರಿಯಸುಖಾಭಿಲಾಷೆಯಿಂದ ನಡೆದ ಐಹಿಕಪ್ರಗತಿಪ್ರಪಂಚ ಇವೇ ಮೊದಲಾದುವುಗಳು ಎಂಥ ಕಠಿಣ ಹೃದಯವನ್ನಾದರೂ ಕರಗಿಸುವಂತೆ ಸರ್ವವಿನಾಶ ಮೂಲವಾಗಿ ಪ್ರಕಟಗೊಳ್ಳುತ್ತಲಿರುವುವು. ದೈವಿಕ ಅಥವಾ ಆಧ್ಯಾತ್ಮಿಕ ಪ್ರಕಾಶವಿಲ್ಲದೆ ಕೇವಲ ಬುದ್ಧಿಬಲದ ಮೇಲೆ ವಿಶ್ವಾಸವನ್ನಿಟ್ಟು ಸದ್ಯಸ್ಕಾಲದಲ್ಲಿ ಎಲ್ಲ ಕಾರ್ಯಗಳೂ ನಡೆದಿರುತ್ತವೆ; ಆದರೆ ಅವುಗಳಿಗೆ ಸಿದ್ಧಿಯುಂಟಾಗುವಂತೆ ಕಾಣಿಸುವುದಿಲ್ಲ. ನಮ್ಮ ಜನರಲ್ಲಿ ಇದೇ ಸ್ಥಿತಿಯಿರುವುದು. ನಾವಾದರೂ ಬೌದ್ಧಿಕ-ಬಲವನ್ನೇ ಅನುಸರಿಸಿ ಪರಕೀಯರನ್ನು ಸರಿಗಟ್ಟಬೇಕಾಗಿದೆ. ಈ ಪ್ರಸಂಗದಲ್ಲಿ ನಾವು ಹಳೆಯದನ್ನು ಹಳಿದು ಚೆಲ್ಲಿಕೊಡತಕ್ಕದ್ದಲ್ಲ. ಹೊಸದಾದುದನ್ನು ಅತ್ಯವಶ್ಯಕವೆಂದು ಭಾವಿಸಿ, ಪರೀಕ್ಷಿಸಿ, ಸ್ವೀಕರಿಸಿ, ಸಾಧಿಸಿ, ಹೊಸದರ ಕೂಡ ಹಳೆಯದನ್ನು ಜೊತೆಗೊಳಿಸಬೇಕು. ಸದ್ಯಕ್ಕೆ ನಮಗೆ ಯೋಗ್ಯವಾಗಿದ್ದ ದೇಶೋದ್ಧಾರಕಾರ್ಯವನ್ನು ಬೌದ್ಧಿಕ ರೀತಿಯಿಂದ ಜರಗಿಸಬೇಕು; ದೇಶೋದ್ಧಾರಕ್ಕೆ ನಮ್ಮ ಸರ್ವಸ್ವವನ್ನು ಅರ್ಪಿಸಬೇಕು. ಆ ಬಳಿಕ ದೊರೆತ ಸಿದ್ಧಿಗೆ ಹಳೆಯದನ್ನು ಚೆನ್ನಾಗಿ ಸೇರಿಸಿ ಬಿಟ್ಟರೆ ಭರತಖಂಡದಲ್ಲಿ ಸ್ವ(ರ್ಗ)ರಾಜ್ಯವೇ ನೆಲೆಗೊಳ್ಳುವುದು

ಈ ಕವಿತೆಯು ಮೊದಲು "ಜಯಕರ್ನಾಟಕದಲ್ಲಿ" ಪ್ರಕಟವಾಗಿದ್ದಿತು.]

[1] ರವಿಯು ಕರಿಯಾಗುವನೆ ಚಂದ್ರ ಕಳೆಯೇರುವನೆ ।
ಅವನಿ ಮಳಲಾಗುವಳೆ ಜಲವು ಜಡವಾಗುವುದೆ ।
ಕವಿದ ಮೋಡಗಳು ಹೊಗೆಯಾಗುವುವೆ ಚಿತ್ತಿಗೆಯು ಹರಳಾಗಿ ತಾನುಳಿವುದೆ ॥
ಪವಿಯು ಗಿರಿಯುರಿವುದೇ ಬಡಬಶಿಖಿ ಶರಧಿಯಂ ।
ಸವಿಸುವುದೆ ಯುತ್ಪಾತಗಳು ಕೇಡ ತಂದಪುವೆ ।
ನೆವಮೇನೊ ಧರ್ಮಕರ್ಮಗಳಿಗೆನೆ ದೇವರೆಲ್ಲಿರ್ದಪರೊ ದಂಡಿಸಲ್ಕೆ ॥ ೧ ॥

[2] ದನುಜರೆಲ್ಲಿಹರು ಭೂಸುತರನಪ್ಪಳಿಸುವರು ।
ಕನಿಕರವಬಟ್ಟುಳಿಪೆವೆಂಬ ಸುರರಿಹರೆಲ್ಲಿ ।
ಧನಕನಕವಂ ತೋರಿದು ಮನವ ನೆರೆಗೆಲ್ವ ಮಾರ್ಗವನೆ ಪೇಳ್ವಯ್ಯರೆಲ್ಲಿ ॥
ತನುವಕಾಯಲ್ಕೆ ದೇವರ್ಗೆ ನೈವೇದ್ಯಮೇ ।
ಜನತೆಯೊಳು ಬಾಳಲ್ಕೆ ಧರ್ಮನಿರ್ಬಂಧನವೆ ।
ದಿನದಿನಕೆ ಮಿತ್ತು ಮುಂದಿರೆವಾಗ ಸಾಯಲ್ಕೆ ಸ್ವರ್ಗನರಕಂಗಳಿಹವೇ ॥ ೨ ॥

[3] ಹೆನನಭಯ ಮನುಜರಂ ಮೇರೆಯೊಳಗಿಟ್ಟಿಹುವು ।
ಕನಕಕಾಂಕ್ಷೆಯು ಚಿತ್ರಮಂ ಸುತ್ತಿ ಪದುಳಿಪುದು ।
ನೆನೆವ ಕಾರ್ಯವ ಗೆಲ್ವ ಸ್ಮೃತಿನೊಳು ತೆರೆಮುಸಗಿ ಸಾಮಾಧಿಸೌಖ್ಯಹಿಹುದೈ ॥

---

1. ಧರ್ಮಕರ್ಮಗಳನ್ನು ಬಿಟ್ಟರೆ ರವಿಯು ಕಪ್ಪಾಗುವುದಿಲ್ಲ ಇತ್ಯಾದಿ. 2. ಪರಸ್ಪರ ಭಯದಿಂದ ನಾವು ಬಾಳಿ ಪರರನ್ನು ಬಾಳಗೊಡುವೆವು; ಬೇರೆ ಬಗೆಯ ಭಯದಿಂದ ಧರ್ಮನಿರ್ಬಂಧಾದಿಗಳನ್ನೇಕೆ ಕಾಯಬೇಕು; ರಾಕ್ಷಸರ ಪೀಡೆ ಮುಂತಾದುದೆಲ್ಲ ಈಗ ಇಲ್ಲವೇ ಇಲ್ಲ. ಅಂದ ಮೇಲೆ ದೇವರ ಸ್ಮರಣೆ ಮೊದಲಾದುವುಗಳೆಲ್ಲ ಏಕೆ ಬೇಕು? ೩. ಬೇಕಾದುದನ್ನು ಪಡೆಯುವುದೇ ಒಂದು ಸರ್ವವ್ಯಾಪಕವಾದ ನಿಯಮವು.

ಇನಿತಿನಿತು ಬಿಡದೆ ಕೊರತೆಗಳ ಕಾಣ್ಬುದೆ ಧರ್ಮ- ।
ವೆನಿತೆನಿತುಮಂ ದೊರಕಿಪುದೆ ಪರಮ ಸತ್ಕರ್ಮ- ।
ವೆನಿತಪ್ಪೊಡಂ ಸಾಧಿಪುದೆ ಸರ್ವಸಂಮತಸುನೀತಿ
ಯೆಂಬರಿಲೆ ಮರ್ತ್ಯರು ॥ ೩ ॥

ಕಾಮಾದಿ ಶತ್ರುಗಳು ಮಿತ್ರರಾಗಿಹರಿಲ್ಲಿ ।
ಪ್ರೇಮಾದಿ ಭಾವಗಳು ಬೇಹಾರದೊಡನೆಯುಹ- ।
[3]ಪಾಮಾತ್ಯಪದ ವೀಗಬಂದಿಹುದು ಕಾಕುಕತ್ತರಿ-
ಗೆಲಸಕವಲ್ನುಡಿಗೆ ॥
ವ್ಯಾಮೋಹವುಂಟಖಿಲಭೋಗಭೋಜ್ಯಗಳಲ್ಲಿ ।
ಸಾಮಾದ್ಯುಪಾಯಂಗಳ್ಕೈದಿಹುವು ಕೊಳ[4]ವಿಯಂ ।
ಸಾಮಾನ್ಯರೆಳೆಯುವರ-ಸಾಮಾನ್ಯರೊತ್ತುವರು
ಲೋಕಮಂ ಕಾಳ್ಗಿಚ್ಚಿಗೆ ॥ ೪ ॥

ಹಳ್ಳಿ ಪಟ್ಟಣವಾಯ್ತು ಹಳ್ಳತಾ ಕೆರೆಯಾಯ್ತು ।
ಜೊಳ್ಳಾಯ್ತು ಹಳುವು ಹೊಲ[5]ವಾಡೊಂಜೊಲುರವೆಗೆ ।
ಮೆಳ್ಳೆಸಿತೀಗ ಗುಡುಸಲವಾಯ್ತು ಮಂದಿರವು ಬೀಡೆಯಿಕ್ಕೆ
ಲದೊಳ್ಮೆಸೆ ॥
[6]ಕಳ್ಳನಂ ಸುಳ್ಳನಂ ಕೊರಚನಂ ಹುಚ್ಚನಂ ।
ತಲ್ಲಂಕಮುಳ್ಳೊಳ್ಳೆ ಕೊಳಕನಂ ಕೀಳನಂ ।
ಜೋಳಯಿಸಿ ಗತಿಗಡಿಸಿ ಕೂಡಿರಿಸಿ ಮನುಜಾತಿಗುನ್ನತಿಕೆ-
ತೋರ್ಪರೋವೋ ॥ ೫ ॥

---

3. ಕೆಟ್ಟ ಯುಕ್ತಿ, ಕಪಟಾಚಾರ, ಎರಡರ್ಥದ ಮಾತು ಇವೇ ಕಾರ್ಯ ಸಾಧಿಸುವ ಮುಖ್ಯ ಸಾಧನಗಳಾಗಿವೆ. 4. ಬಂದೂಕು. 5. ಆರಾಮದ ಸಲುವಾಗಿ ಹೊಲಗಳೆಲ್ಲ ಆಟದ ಸ್ಥಳಗಳಾದುವು. 6. ಕಳ್ಳರು ಮುಂತಾದವರನ್ನೂ ಸಮಾನ ನಾಗರಿಕತೆಯಿಂದ ಮನ್ನಿಸಿ ದೇಶೋನ್ನತಿಯ ಮಾಡಬೇಕೆನ್ನುವರು.

ಮೇಲಟ್ಟಮಂ ಬಿಡರು ಬಿಟ್ಟ ಬಯಲಿಗೆ ಬರರು ।
ಹಾಳು ಬಚ್ಚಲ ಬಿಡರು ಹರಿವ ನದಿಯೊಳು ನಿಲರು ।
ಜಾಲಿಕಿಚ್ಚನೆ ಬಿಡರು ಸೂರ್ಯಸಂಕಾಶಕ್ಕೆ[7] ಹಾಸಿಗೆಯ
ಹುಲ್ಪಕ್ಕೆಗೆ ॥

ಕೀಳೂಟಮಂ ಬಿಡರು ಹಾಲ ನರುವೋಗರಕೆ ।
ಸೂಳೆಕೂಟವ ಬಿಡರು ಮನೆಬಾಳ ಸೌಖ್ಯಕ್ಕೆ ।
ನಾಳೆ ಕೊಲ್ಲುವ ಬೇಟವಿಂದೀಗಲಾಂತು[8] ವೊತ್ತಲೆಯೊಳಾ
ಸಿಪರಿಲ್ಲಮಂ । ೬ ॥

ಕಾದಾಡಿ ಸಾಯುವರು ಕಾಣರೈ ಕಾರ್ಯಮಂ ।
ಬಯ್ದಾಡಿ ದೂರುವರು ಸತ್ಯಮಂ ತಿಳಿಯರೈ ।
ಇದ್ದುದನ್ನಿದ್ದು ದೂರದಕೆ ಕೈಯಿಕ್ಕಿ ಯೆಂದಾದೊಡುಂ
ಸೊಗಮಪ್ಪುದೇ ॥
ಹಿಂದಾಗಲೊಡೆಯುವರು ಮುಂದಾಗೆ ಕೊಯ್ಯುವರ - ।
ದೊಂದಾಗಿ ಬಾಳರೈ ಬಿಡಿಯಾಗಿ ತಾಳರೈ ।
ನಿಂದಂತೆ ನೆಲೆಯ ನೆಚ್ಚದೆ ಚಡಪಡಿಪ್ಪರೈ ತಿಪ್ಪಿಯೂ
ಸಾಯಿಯುಂತೆ ॥ ೭ ॥

ಆರ್ಯರಾ ಧರ್ಮವದು ಹಾಳಹಚ್ಚಡವಾಯ್ತು ।
ಪರ್ಯಾಯದಿಂ ಬಂದ ಪಾಶ್ಚಾತ್ಯಮಾರ್ಗವದು ।
ಪರ್ಯಾಪ್ತವಾಗಿಹುದು ದೇವದೇವರ ಕಾರ್ಯಕೀಗ
ಚೆಂದೊಡವಿನಂತೆ ॥

---

7. ತೀಕ್ಷ್ಣಪ್ರಕಾಶ. ೮. ತಮ್ಮ ಈ ಜನ್ಮದಲ್ಲಿಯೇ ಎಲ್ಲ ಸೌಖ್ಯವನ್ನೂ ಪಡೆಯಬೇಕೆಂಬ ಹವ್ಯಾಸದಲ್ಲಿ ಅಕಾಲಮರಣವನ್ನು ತಂದುಕೊಳ್ಳುವರು.

ಸೂರ್ಯನಾರಾಧನವು ಪಿತೃಗಣದ ತರ್ಪಣವು ।
ತಿರ್ಯಂಚಜಗಕೆ ಯಣುರೇಣುಗಳಿಗನ್ನವುಂ ।
ಮರ್ಯಾದೆಯುಂ ಮೀರ್ದ ಮರುಳಾಟವಾಗೀಗ ರೋಡಿಕೆಗೆ[9]
ಪಕ್ಕಾಗಿವೆ ॥ ೮ ॥

ದೇವರಂ ಕಾಣಲ್ಕೆ ಹಿಂದು ಹರಕಾದನೈ ।
ದೇವರಂ ಕಾಣದಕೆ ಯವನು ತಿರುಕಾದನೈ ।
ದೇವರಂ ಮರೆದಿರ್ದ ದಾಂಭಿಕರಿಗಾಳಾಗಿ ಖೂಳಾಗಿ
ಬಾಯ್ಬಿಡುವನೈ ॥

ದೇವರಂ ಹಿಂದೊಗೆದು ದಾಯೂದರಂ ಕೂಡಿ ।
ದೇವರಂ ಕಣ್ಗೆಡಿಸಿ ದೈತ್ಯಸುಖವನೆ ಬೇಡಿ ।
ದೇವರಂ ಮುರಿಬಡಿದು[10] ದೇಹಸಚ್ಯುತವೆಂದು ಕನಸಿಂಗೆ
ಕಣ್ಬಿಡುವನೈ ॥

[11]ನೀಚನಿರ್ದೇವಗತ ಧರ್ಮಸುಕುಲಾಚಾರ- ।
ವಂಚಿತಾತ್ಮನು ಹಿಂದು ಕತ್ತಲೆಯು ಕರಿದೀಪ- ।
ಮಂ ಚಳಕದಿಂ ಕೊಂಡು ಕಣ್ಮುಚ್ಚಿ ಕುಣಿಯೊಳಗೆ ಕರಿ
ಮಣಿಯು ಕಾಣಬಯಸಿಪಂ ॥

ಆಚೆಯಾಚಾರಶೀಲ ವಿಚಾರ ಚೇತನಗ- ।
ಳೀಚೆಗಿವನೊಳು ಸೇರಿ ಹಳಿಯುಮಂ ಹಾಳಿಕ್ಕಿ ।
ಸಂಚಿತವೆ ಬಲವಂತವೆಂದು ತೋರುವ ಮುನ್ನ ಹಿಂದು
ಮೇನಿಂದ್ರನೇನು[12] ॥ ೧೦ ॥

---

9. ತಿರಸ್ಕಾರ. 10. ಮುರಿತು. 11. ಸ್ವಕುಲಾಚಾರಾದಿಯನ್ನು ಬಿಟ್ಟು ಹಿಂದುವು ಪಡೆಯಲವಶ್ಯನಲ್ಲದ ಕ್ಷುಲ್ಲಕ ವಸ್ತುಗಳನ್ನು ಮೂಢ ಮಾರ್ಗದಿಂದ ಪಡೆಯುನೋಡುತ್ತಾನೆ. 12. ಹಿಂದುವೂ ಇಂದ್ರನೂ ಅಷ್ಟೇ ದುರ್ಬಲರು.

ಹಿಂದುಮತ ಹದಗೆಡಲು ಬೇಕೇಕೆ ಪೊಂದಲಿ- ।
ಕ್ಕಂದವಲ್ಲದ ಧರ್ಮವಿಂದೇಕೆ ಲೋಕದೊಳು ।
ಸಂದವಾಗಿರ್ದ ಹಿಂದುವನನ್ನು ಬಹುರೂಪದಿಂ ಬಾಧಿ
ಪುದು ಬೇಕೆಲೋ ॥
ವೇದತತ್ತ್ವವ ನೀಗಿ ನೆರೆದ ನಡತೆಯು ಮೀರಿ ।
ನೊಂದು ಬೇಯುವುದೇಕೆ ಪ್ರಕೃತಿ[13] ಪುಸ್ತಕವಾಗಿ ।
ಮಂದಿಗಳ ಕರದಿ ಬೀಳುವುದೇಕೆ ಕಾಲನಾ ಯಜ್ಞಕುಂಡವ
ಮರೆತೆಯಾ ॥ ೧೧ ॥
ಉಗೆಯು ಸೇರಾಗುವುದು ನೀರು ಮಂಜಾದಪುದು ।
ಬಗೆಯೆ, ಮಂಜೇ ನೀರಕಲ್ಲಾಗಿ ಕಾಣ್ಬುದೀ ।
ಬಗೆಯರಿತು ಸೇರನೊಲ್ಲೆನ್ನುವುದೆ ಮತ್ತೆ ಸೇರನೆ ಮುಚ್ಚಿ
ಕೆಡಿಪಬಹುದೇ ॥
[14]ಜಗಿದ ನೀರಿಂದು ಮಡುವಾಗೆ ಕಡು ಕೆಡುವುದೈ !
ವಿಗತಿಯಿಂ ಕಿರುಗಣಿಯು ತಾನಾಗೆ ನುಂಗುವುದು ।
ಸಿಗುವ ಜೀವಿಗಳನ್ನು ನೀರಿಗದಕೇ ಪ್ರವಾಹವು ಸಿದ್ಧವಲ್ಲಿ
ಜೀಯಾ ॥ ೧೨ ॥
ಎಲೆ ಹಿಂದು ನೀಂ ಹರಿವ ನದಿಯೊಲಾ ಸ್ಥಳಜಡವೆ ।
ಯಲೆಯುವಾ ತೆರೆಗಳಿಗೆ ಮೆಯ್ಯೊರಿತು ತಡೆಯದಿರು ।
[15]ನಿಲವೆ ಯೋಡುವ ಪಥದೆ ನಿನಗೆ ಸಂಪೂರ್ಣ ಜೀವದ
ಬಲವು ದೊರೆಯುವುದು ಕಾಣ್ ॥

---

13. ಸೃಷ್ಟಿಯ ಗೂಢ ತತ್ತ್ವವು ತಿಳಿಯುವರಿಗೆ ಏಕೆ ತಿಳಿದು ಬರಬೇಕು? (ಸ್ಥಿತಿಯು ಬದಲಾಯಿಸಿತೆಂಬುದೇ ಭಾವವು.) 14. ಕಟ್ಟಿ ಹಾಕಿದ; ಚಲನೆಯನ್ನು ಪಡೆಯದಿದ್ದ. 15. ಚಲನೆಯೇ ಬಲವು. ಈ ಬಲವನ್ನು ಗಂಡಾಂತರಗಳಲ್ಲಿ ಬಿದ್ದು ಆ ಬಳಿಕ ಪಾರಾಗುವುದಕ್ಕಷ್ಟೇ ಉಪಯೋಗಿಸತಕ್ಕದ್ದಲ್ಲ. ವಿಶೇಷವಾಗಿ ಗಂಡಾಂತರಗಳಲ್ಲಿ ಬೀಳದಿರುವುದಕ್ಕೇ ಉಪಯೋಗಿಸಬೇಕು.

ಮಳಲ ನೆಲವನು ತೊಲಗು ಕಲ್ಲಿನೊಳು ಕಿನಿಸದಿರು ।
ಕೆಲವ ಕೆಯ್ಗಣ್ಮದಿರು ಗಾಢವನು ಸೇರದಿರು ।
ಕಲೆಯುಬಂದರೆ ಕೂಡು ನಿಜಭಾವಮಂ ನೀಡು ಕಾಪಾಡು
ಘನವಂತರಂ ॥ ೧೩ ॥

ತುಪ್ಪದಾ ಸವಿಗಂಡು ನೊರೆಹಾಲ ಕೆಡಿಸುವುದೆ ।
ತೆಪ್ಪದಾ ಸುಖವರಿಯಲೀಸುವುದನುಳಿವುದೆ ।
ಕೊಪ್ಪರಿಗೆ ಹೊನ್ನಿನಿಂ ಕಳಸನೇಳಿಪುದುಂಟೆ ಮೀಸಲಕೆ



ಕಸಬೇಡವೆ[16] ॥

ಜೊಪ್ಪನಾ ಕಣ್ಣುಗಳು ಭೋವಿಯಾ ಪಾದಗಳ – ।
ಗರ್ಪಿಸಿದ ಪುಷ್ಪಂಗಳಾಗವೇ ಅಪ್ಪ ತಿ – ।
ಮ್ಮಪ್ಪನರೆಯಾಗೆ ಕರಿಯೊರಲ ಗುಂಡಾತನಿಗೆ ಚಟ್ಟಣಿ –
ಯರಿಯ ಜೇಡವೇ । ೧೪ ।

ರವಿಯು ಬೆಳಗಿದನೆಂದು ದೀಪಮಂ ದೂಷಿಪುದೆ ।
ಕವಿಯು ಪಾಡಿದನೆಂದು ಕೋಗಿಲೆಯ ನೂಕುವುದೆ ।
ಯುವತಿ ದೊರಕಿದಳೆಂದು ಯೌವನವ ದೂಡುವುದೆ
ಮುದುಕ ತಾಂ ವೊಮ್ಮಗನನು ॥

ತೆನೆರುವುದೆ ಜೋಳ ಝಲ್ಲಿರಿಸೆ ದಂಟಿಕ್ಕುವುದೆ ।
ಕುವರ ಪುಟ್ಟಿದನೆಂದು ಮಡದಿಯಂ ಕೊಲ್ಲುವುವೆ ।
ಭವದ ತತ್ವವನೊಮ್ಮೆ ಕಂಡುದಕೆ ಬುವಿಗೊಡುವ
ಜಾಣನೊಲ್ಲೆಂಬುದೊಳಿತೇ । ೧೫ ॥

ಮಲ್ಲಿಗೆಯ ವಲ್ಲಿಯಂ ಚಲ್ಲೆಗಾರ್ತಿಯು ಗಲ್ಲ– ।
ದಲ್ಲಿರಿಸಿ ಜೆಲ್ಲದಾ ಮುಡಿಗಟ್ಟೆ ಹಾಲುಣಿಸಿ ।
ಪುಲ್ಲಲೋಚನದೊಳ್ಳೆ ಬೆಳಕು ನ್ಮೈಗಾವು ಸೊಲ್ಲೆಲರುಗಳ
ಸಲ್ಲಿಸಿದೊಡೇಂ ॥

---

16. ಒಂದು ವಸ್ತುವು ಪವಿತ್ರವೆಂದು ಹೇಳುವುದಾದರೆ ಅಪವಿತ್ರ ವಸ್ತುವು ಹತ್ತಿರಿರಬೇಕು.

ಮಲ್ಲಿಗೆಯು ಬಲ್ಲತ್ತ ತನ್ನ ಬಲ್ಗಂದವಮಂ ।
ಚೆಲ್ಲುವುದು ಬೇಕಾಗೆ ಕಲ್ಲುಹುಡಿಯಾದ ನೆಲ- ।
ದಲ್ಲಿ ಹೂಳಲ್ಲಿ ಹಿತ್ತಲದ ಹೊಲಸಿಕ್ಕು ಮೇಲೆ ನೀರ -
ನೆರೆ ಮಾನವಾ ॥ ೧೬ ॥

ಸೃಷ್ಟಿ ತನ್ನಯ ನೂತ್ನಸೌಭಾಗ್ಯದೊಳಗೆ ತ- ।
ನ್ನಿಷ್ಟ ಸಂದೇಶವನು ಸಾರ್ವ ವುತ್ಕೃಷ್ಟತರ ।
ದೃಷ್ಟರೂಪವ ತೋರಿ ಬಾಲಾರ್ಯಚಿತ್ತದೊಳು
ಪೊಟ್ಟಾಗೆ ವಿಸ್ಫುರಿಸಿದಳ್ ॥

ಶ್ರೇಷ್ಠತತ್ವವು ಮತ್ತಮಲ್ಲಿಂದೆ ಪೊಣ್ಮೆ ಸಂ - ।
ತುಷ್ಟಿಯಂ ತಸುತಲಾ ಮುದ್ದು ಮನ ನಿರ್ದುಷ್ಟ ।
ನಿಷ್ಠೆಯಿಂ ಭಜಿಸಿ ಹಾಡಿತು ಬೇಳ್ವ[17]ದುಪಕಾರಿ ಪಂಚ -
ಭೂತಾದಿಗಳಿಗೆ ॥ ೧೭ ॥

ಆದೊಡೇಂ ಕಾಲಗತಿಯಲಿ ಯಡಗಿತೀ ನೊಲವು ।
ಆಮುದೀ ಶೋಭೆಯೆಡಕತಿ ಪರಿಚಯಂ ಬಂದು ।
ಮೇದಿನಿಗೆ ಕತ್ತುರಿಯು ಹೆಚ್ಚಾಗೆ ಮಿತ್ತಿಕೆಯ ಮಾಡುವುದು
ಸಾಸಾಜವು ॥

ಆದಿಯಿಂ ಪ್ರಳಯವೀ ಪ್ರಳಯದೀದಾದಿ ಯೆಂ - ।
ದೊಂದು ನುಡಿ, ತಲೆಯ ತೂನೆಯುವ ತೊಡಕು, ಸಾಕಿದೋ ।
ಆದಿಯುಂ ಪ್ರಳಯವುಂ ಸಮಕಾಲವಾಗಿಂದು ಹಿಂದ -
ದೊಳು ಕಾಣ್ಬಂದಿವೆ ॥ ೧೮ ॥

---

17. ಪ್ರಾಚೀನ ಕಾಲದಲ್ಲಿ ಆರ್ಯರು ಸೃಷ್ಟಿಯನ್ನು ನೋಡಿ, ಅದರ ಭವ್ಯ ರೂಪಕ್ಕೆ ಮೆಚ್ಚಿ, ಅದನ್ನು ಭಜಿಸಿ ಅದಕ್ಕೆ ಯಜ್ಞಾದಿಗಳಿಂದ ಸಂತುಷ್ಟಗೊಳಿಸಿ ತಮ್ಮ ಉಪಕಾರಬುದ್ಧಿಯನ್ನು ಪ್ರಕಟಿಸಿದರು.

ಸಾರಸಂಗ್ರಹಣವಿಲ್ಲೀಗ ಸರ್ವಾಂಗದೊಳ್ ।
ಪಾರುಗಾಣಲ್ಬೇಕು ನಿಜಸುಖಾಶೆಯು ತಗ್ಗಿ ।
ಮೂರಾಗಿ ಮೈಸೊಗವು ಸೊಕ್ಕುಬೇಕಲ್ಲದೇ ಪೆರತಿಲ್ಲ
ನಿವೃತ್ತಿಯು ॥

[18] ಬೇರೆ ಬೇರಾದ ಶಾಸ್ತ್ರಂಗಳಿನಿಯಾಗಿ ನೆರೆ ।
ಸೇರಿ ಜೀವನ ಪುಟ್ಟಿಸೀಶ್ವರನ ಸೀಳ್ವನ್ನ — ।
ಮೀರಾಟ ನಿಲ್ಲದೀ ಹೋರಾಟನೊಲ್ಲದೊಡೆ ಮೋಕ್ಷವದು
ಮಾರ್ಗಿಲ್ಲನೈ ॥ ೧೮ ॥

ಈ ಮಹಾ ಪ್ರಳಯದೊಳು ಹಿಂದು ಹಿಂದುಳಿವನೇ ।
ಸೋಮಶೇಖರ ಕಾಯೊ ಹಿರಿಯ ಮನೆತನ ವುಳಿಸೊ ।
ಕೇಮದಿಂ ಬಳೆವಂತೆ ಸಾಮರ್ಥ್ಯವಂ ದಯಿಸಿ ಬೂಟಾಟವಂ
ನಿಲ್ಲಿಸೊ ॥

ಪ್ರೇಮವಂ ಬಲ್ಲವಂ ತ್ಯಾಗವಂ ಕೊಂಡವಂ ।
ನೇಮವಂ ಪೊತ್ತವಂ ಧೀಮಂತ ವಿಕ್ರಮಂ ।
ಸೋಮಸೂರ್ಯರೆ ನೋಡಿ ಹಿಂದುವಂ ಸೃಷ್ಟಿ[19]ಯೋದಿಸು
ವಂದವಾ ॥ ೨೦ ॥

ಎಲವೊ ದಮ್ಮಯ್ಯ ನೀಂ ಹಳೆ ಮೋಟ ಮರವಲ್ಲ ।
ಛಲಛಲರೆ ನೀನಿದೋ ಸೊಲ್ಲೊಡೆದ ಹಸುಗೂಸು ।
ಬಳಲದಿರು ಬಳಸಿದೀಯೆನ್ನ ಸೌಂದರ್ಯವಂ ಕಂಡು
ಸೊಗಗಾಣದುದಕೆ ॥

---

18. ಶಾಸ್ತ್ರಗಳ ಬಲದಿಂದಲೇ (ಬೌದ್ಧಿಕ ಬಲದಿಂದಲೇ) ಜನನ ಮರಣಗಳನ್ನೂ ಸ್ವಾಧೀನಪಡಿಸಿಕೊಳ್ಳುವ ವರೆಗೆ ಬೌದ್ಧಿಕ ಮಹತ್ವಾಕಾಂಕ್ಷೆಯು ನಿಲ್ಲದು. 19. ನೂತನ ಜ್ಞಾನಾದಿಗಳಲ್ಲಿ ಇನ್ನೂ ಕೂಸಾಗಿರುವ ಹಿಂದುವಿಗೆ ಸೃಷ್ಟಿದೇವತೆಯು ಪಾಠ ಕಲಿಸುವಳೆಂದು ಹೇಳುವುದು ಪ್ರಕ್ಷಿಪ್ತವಾದ ನೂತನ ಕಲ್ಪನೆಯು. ಇದು ಕವಿತೆಯ ವಿಷಯದಲ್ಲಿ ನಾವೀನ್ಯವನ್ನು ತಂದು ಕೊಟ್ಟಿತು. ಹಿತದ ಮಾತುಗಳನ್ನು ಹೇಳಲಿಕ್ಕೆ ಅನುಕೂಲಮಾಡಿಕೊಟ್ಟಿತು.

ಬಲಿದ ಪರಿಬೊಗೆದೆನ್ನ ನಾಗಪ್ಪ ಕಾರಿರುಳ ।
ಕಳೆದೆನ್ನ ಮುದ್ದು ಚಂದಣ್ಣ ಸುಡುರಕ್ಕಸರ[20] ।
ಗೆಲವ ನನ ಸೂರಯ್ಯ ನಾಂ ಪೇಳ್ವೆನೀಗ ನಿನಗುಚಿತಮಿದು
ಯಜ್ಞಕುಂಡ ॥ ೨೧ ॥

ಸತ್ವವೇ ಕಲ್ಲದಕೆ ಪ್ರೇಮವೇ ಗಚ್ಚು ಬಾಂ- ।
ಧುತ್ವವೇ ಮೆತ್ತು ಬಲಧೈರ್ಯಸಾಹಸ ನಿಶ್ಚಿ- ।
ತತ್ವಾದಿಯೇ ಸಾರಣೆಯು ಮತ್ತೆ ಕಾರುಣ್ಯವೇ ಕಾರಣೆಯು
ತಿಳಿದೆಯಾ ॥

ತತ್ವತತ್ವವ ತಿಕ್ಕಿ ಸತ್ಯದಾ ಗಾಳಿಗೊಡು ।
ಚಿದ್ವಹ್ನಿಯಿಂ ಚುರ್ಚುಯಾತ್ಮ ಸಮಿಧೆಯನುಣಿಸು ।
ಋತ್ವಿಜನೆ ಪೊಸಜಾಣ[21] ಮಂತ್ರವಧುನಿಕ ಶೋಧವಾಜ್ಯ
ವೆಸಮ್ಯಾರ್ಯತನವು ॥ ೨೨ ॥

ಸೋಪ್ರತವನುಣ್ಣುವರ[22] ಪೆಸರ ಕೇಳೆನ್ನಣುಗ ।
ಜೀವನೋಪಾಯದುದ್ಯೋಗವಾ ವ್ಯಾಪಾರ ।
ಭಾವದೈಕ್ಯವ[23] ಕೋವ ಪೊನ್ನುಡಿಯು ಪರಧರ್ಮ ಸೈರಣೆಯು
ವೈಜೋಕೆಯಾ ॥

ಕಾವಕ್ಕೈದುಗಳಾತ್ಮಿಕಾಭ್ಯಾಸ ನಾಡೊಳಿತ ।
ನೀವ ಬಲೆಪ್ರೀದು ಸಾಹಿತ್ಯಶಾಸ್ತ್ರಾದಿಗಳು ।
ನಾವು ನಮ್ಮೈಕ್ಯೆಯಿಂದಿರ್ದು ಹಂಗುಳಿದು ಬಾಳ್ವುದು
ನೆರವಣಿಗೆ ಸೈಸೈ ॥ ೨೩ ॥

---

20. ದುಷ್ಟ ರಾಕ್ಷಸ. ಹಳಿಯುವದನ್ನೂ, ಮುತ್ತಿಕೊಂಡುದನ್ನೂ, ನಾಶಪಡಿಸುತ್ತಿರುವುದನ್ನೂ ಹೋಗಲಾಡಿಸುವದರಿಂದ ನಾಗಪ್ಪ, ಚಂದಣ್ಣ, ಸೂರ್ಯ ಎಂಬಿವುಗಳ ಸಾಧರ್ಮ್ಯವನ್ನು ಇಲ್ಲಿ ಹೇಳಿದೆ. 21. ಹೊಸ ವಿದ್ಯೆ. 22. ಆಹುತಿ 23. ಸದ್ಭಾವವನ್ನು ಒಟ್ಟುಗೂಡಿಸುವಂಥ ಸತ್ಯವಚನವು.

ತಡೆಯೊ ತಡೆಯೋಡಬೇಡಯ್ಯ ಮುಗುಳ್ನೀಂ ಭರದೊ- ।
ಳಿಡೆತಪ್ಪಿ ಬೀಳ್ವೆಡ ಮನೆಗೆದ್ದು ಹೊಲಗೆಲ್ಲೊ ।
ಅಡವಿಯುಲಿ ನೋಡು ಸಾರಂಗ ಸ್ವೈರಿಸನನ್ಯನಂ ಮುನ್ನ
ಮನೆಯೊಳಿಂತುಂ ॥
ಪಡೆದು ದಿವ್ಯಾಕ್ಷಿಯುಂ ಜಗವ ನೋಡಿತ್ತ ಕಡೆ ।
ಪಡಿತಳವ[24] ಪಡೆವನ್ನನೂತಳದ ನೀರ್ಬಿಡದು ।
ಪೊಡನಾಗಿ ಕಾಸದೊಡೆ ಕಬ್ಬಿಣವದಪ್ಪುದೈ ದೊಡ್ಡಿತೆಗೆ
ಹಾಯಬೇಡಾ ॥ ೨೪ ॥
ಈ ಕಾರ್ಯವೀಗ ಕೈನೀಡಿ ಕರೆವುತಿರೆ ನೀ- ।
ನೀ ಕಾಲದೊಳು ಪಸುಳೆ ಕೋಟಲೆಗೆ ಕೂಡದಲೆ ।
ಯೇಕಾಗ್ರಚಿತ್ತದಿಂದೀ ಯಜ್ಞಕುಂಡದೊಳ್ಸರ್ವ
ಸ್ವನನ್ನರ್ಪಿಸೈ ॥
ಶ್ರೀಕಾಂತ ನಾರಾಯಣಾಂಕಿತ ಮಹಾಕಾಲ- ।
ನೇಕೇಳ್ವೆ ಬಳೆಸಿ ನಿನ್ನನು ದಿವ್ಯಸೌಖ್ಯದೊಳು ।
ನಾಕೇಶನೊಡೆಯನೀನೆಂಬಂತೆ ಮಾಳ್ಪನಿನ್ನೀ ಸ್ವರ್ಗ[25]
ರಾಜ್ಯಪದದೊಳ್ ॥ ೨೫ ॥



24. ಮೇಲ್ಪದಿಗೆ ಇದ್ದ ನೀರಿನ ಸಂಗ್ರಹಕ್ಕೂ ಕೆಳಬದಿಗೆ ಇದ್ದ ನೀರಿನ ಸಂಗ್ರಹಕ್ಕೂ ಸಂಬಂಧವುಂಟಾಗಲು ಸಮಪಾತಳಿಯನ್ನು ಹೊಂದುವ ವರೆಗೆ ಮೇಲ್ಪದಿಯ ನೀರು ಕೆಳಬದಿಗೆ ಹರಿಯಲೇ ಬೇಕು.
25. ಸ್ವರಾಜ್ಯ.

೧೧.

# ಯೌವನೋದಯ.

[ ಈ ಕವಿತೆಯು "ಸತೀಸ್ಮಾರಕ" ವೆಂದು ಬರೆಯಬೇಕೆಂದಿದ್ದ ಪುಸ್ತಕದ ಒಂದು ಭಾಗವು. ಹಲಕೆಲವು ತೊಂದರೆಗಳ ಮೂಲಕ ಗ್ರಂಥವನ್ನು ಪೂರ್ಣ ಬರೆಯುವುದಾಗಲಿಲ್ಲ. ಇಲ್ಲಿ ಇದನ್ನು ಆ ಪುಸ್ತಕದಲ್ಲಿ ಬರಬಹುದಾದ ಕವಿತೆಯ ಮಾದರಿಯೆಂದು ಕೊಟ್ಟಿದ್ದೇನೆ. ಪ್ರತಿಯೊಬ್ಬನಿಗೂ ಯೌವನೋದಯದಲ್ಲಿ ಪ್ರಾದುರ್ಭವಿಸುವ ವಿಚಾರಗಳನ್ನು ಈ ಕವಿತೆಯಲ್ಲಿ ವರ್ಣಿಸಿರುವೆನು. ಯೌವನದ ಮಹಿಮೆಯು ತಿಳಿಯಲಶಕ್ಯವು; ಯೌವನದಲ್ಲಿ ಯೋಗ್ಯ ಧ್ಯೇಯವನ್ನಿಟ್ಟುಕೊಂಡು ಬಾಳಿದವನಿಗೆ ಪ್ರೇಯಸ್ಸು ಶ್ರೇಯಸ್ಸುಗಳೆರಡೂ ದೊರೆಯುವುವು. ಈ ಕವಿತೆಯ ವೃತ್ತವು ಚಂಪಕಮಾಲೆಯು. ಇದರ ಭಾಷೆಯು ಗಡಚಾಗಿರುವುದೇನೋ ನಿಜ. ]

[1] ಪಸುಳನ ಪೂರ್ವರೂಪನಿವನೆಂದುರೆ ಮೆಚ್ಚಿ ಪರಾಂಗನಾಜನಂ ।
ಬಸಿರೊಳೊಡರ್ಚಿ ತಿರ್ದಿ ಮುದಮೇರೆ ಪಳಂಚಿ ತೊದಳ್ಪು
ಮುದ್ದಿದಾ ॥
ಸಿಸುವಿನಲಂಪು ಕಲ್ತೊಡೆವ ಪೆಂಪಸಳುರ್ವ ಕುಮಾರಕಂಗೆ ನಿಂ-।
ಳ್ದೊಸಗೆ ನಿಮಿರ್ಚಿ ಬಂದುದಲೆ ಚೆಂದದ ಸಂದ ಸುಯೌವ
ನೋದಯಂ ॥ ೧ ॥
[2] ಸೆಂದಮುದಂಗೆಯುಪ್ಪಿ ಕಡು[3]ಸೊಂದರ್ಣಷ ತೊಳ್ಕಿತ್ತಡೆಯುಂ
ಪೆರ್ಚ್ಗಳುಂ ।
ತೋರುವರೋರೆ ನೋಟ್ಟದೊಳ್ ಜೇಟನ ನಿಸಿ[4]ಪ್ಪೊಸತಾದ ಪೆಂಡಿರುಂ ।

1. ಎಲ್ಲರೂ ಎತ್ತಿಕೊಂಡು ಮುದ್ದಿಸುವ ಶೈಶವವು ಮೀರಿ, ಓದಿ ಕಲಿಯುವ ಬಾಲ್ಯವು ಮುಗಿದು ಚೆಂದವಾದ ಯೌವನವು ಪ್ರಾಪ್ತವಾಗುವುದು. 2. ಪೂರ್ಣತೆಪಡೆಯಿತು. 3. ಜಿನಸಾದವು. 4. ನೂತನ ಯುವತಿಯರು.

ಮೀರಿದುದೆಂದವಂ ಮದನಚೇಷ್ಟೆ ಮನಕ್ಕಸುಗೊಳ್ಳದಾಯ್ತು
ಮೇಣ್ ।
ಪೀರದೆ ಪಿಂಗದೇರ್ದುದದು ಚೆಂದದ ಸಂದ ಸುಯೌವನೋ –
ದಯಂ ॥೨॥

ಮದನಗಿದಸ್ತ್ರ ನಿಷ್ಕಷಣಶಾಲನೊ ಮನ್ಮಥರಾಜ್ಞಿವಾಸವೋ ।
ಸದನವೊ ಕಾಮಮಂತ್ರಣಕೆ ಮೇಣ್ ರತಿಯಾಟದ
ಪಟ್ಟಹಾಸವೋ ॥
ಕದನ[5] ನಿದಾನವೋ ಮದನಗೀಶಗೆ ಮತ್ತೆ ರತಿಪ್ರಸಾದವೋ ।
ಪದೆದುಸಿರಲ್ಕೆ ಬಾರದೆನೆ ಪೆರ್ಚಿತು ಸಂದ ಸುಯೌವನೋ
ದಯಂ ॥ ೩ ॥

ಜಗಮಿದು ಸುಳ್ಳು ಬಾಳ್ವೆಬರಿದೀ ತಿರೆ[6]ಯೊಲ್ಮೆಯೊಳಿಲ್ಲವೈ ಪುರುಳ್ ।
ತೆಗಳ್ತ್ರಿವರ್ಗಮಂ ಪೊಗಳೊ ನೀಂ ಯತಿಯುಂ ಕೊಳೆಲ್ಕೆ ವಿರಾಗಮಂ ॥
ಮುಗುಳ್ದಳೆಬಾಳನೊಲ್ಲದೊಡೆ ಜಾಸಿಸೊ ಬೊಮ್ಮನನಾತ್ಮಹೀನನಂ ।
ಅಗಣಿತವಾರವೋಜನಿಸೆ ಸತ್ಯಮೆ ಪೆರ್ಚಿರೆ ಯೌವನೋದಯಂ ॥೪॥
ಜೀನಿಯು ಭೀತಿ ಮಿತ್ತುವಿನ ಮಂಕು ವಿಪತ್ತಿನ ಸತ್ತು ವಿತ್ತದಾ ।
ಜಾನಮುಪೋದಿಸಾದರ ವಿವೇಕದ ದೂರು ಸುಧರ್ಮದಾರ್ಜನಂ ॥
ಮಾನದ ಮಾತು ನೀತಿಯು ನಿಯಂತ್ರಣ ಕೇಣದ[7] ಕೂನವೆಂಬಿವಿ– ।
ನ್ನೆಸವು ದೇಸೆ[8]ಯೆಂಬ ತೆರ ನಾಳ್ಪುದು ಸಂದ ಸುಯೌವನೋ
ದಯಂ ॥ ೫ ॥

ಅಱತಿರುಳ್ಕಂ[9] ಕರಂ ಸಮೆದು ತೆಕ್ಕುಪೆನಾಂ ಸ್ಮರಾದಿ ಸೂರಿಯು– ।
ನ್ನೆಸೆಸೆಸಂತ ಶಕ್ತಿಯುನಮರ್ಚಿ ಸಮುದ್ಧತ ಮಾರುತೇಯ[10]ರಂ ॥

---

5. ಈಶ್ವರನೂ ಕಾಮನೂ ಕಾದಾಡುವ ಕಾರಣವು. 6. ಭೂಮಿಯಲ್ಲಿ ಮೆಚ್ಚಿಕೆ. 7. ಕೋಪದ ಚಿಹ್ನೆ. 8. ಶೋಭೆಯೊಂದವು. 9. ಧರ್ಮದ ತತ್ತ್ವ. 10. ಹನುಮ ಭೀಮರನ್ನು.

ದೊರೆಕೊಳುತಂ ಮಹತ್ತ್ವಮು ಸುನೀತಿಯು ನೋತ್ತುಪೆನಿಗೆ ಶೌರಿಯುಂ ।
ಮೆರೆವೆನಸಾವ್ಯನೆಂದೊರೆವನೋರ್ವ ಯುವಂ ಗಡ ಯೌವನಾದಿಯೊಳ್ ॥ ೬ ॥

ವಂಶದ ಕೀರ್ತಿ ದೇಶದಭಿವೃದ್ಧಿ ಪರತ್ರದ ಸಿದ್ಧಿ ಬಲ್ಲರಾ- ।
ವೇಶದ ಬೋಧ ಮಿಂಗಿತದ ಪಾಂಗು ವಯಸ್ಕರ ಯೋಗ[11]ಮೆಂಬಿವು- ।
ದ್ದೇಶಗಳಿಲ್ಲ ಸೇರ್ದು ಪತ್ರದೋರುವ ಮುನ್ನಮನಂಗ ದೇವ ಸಂ- ।
ದೇಶ ಪತಾಕೆ ಮೇಲ್ಪುಟಿಯು[12]ತೆಂಬದೊಳೊಪ್ಪಿತು ಯೌವನಾದಿಯೊಳ್ । ೭ ॥

ಐಮ ಕಿರಿ ಪಿದ್ದೆ ಯ್ಯೆಸಿರಿಯಿದೇಂ ಘನ ಮೆಂತುಟೊ ಮೆಯ್ಮೆ ವೆಂಬುದೊಂ- ।
ದದೆಯನೆ ಪಾರೆ[13]ನೆಂದು ಕಡು ನೊಂದು ಸಮಂತು ಕುಸಿಗಿ ಯುಬ್ಬೆಗ- ।
ಕ್ಕಾದಿರ್ದ*ಳಯೊಳ[14]ಂಗಗಳನೊಡರ್ಚುವ ಕಾಲದಿ ಬೇಗಿಯುರ್ಬುವಾ ।
ಮುದ ಮದ ಚೋದ್ಯಮು ಮದುವೆಯೆಂಬುದಮುರ್ದುಮ ಯೌವನಾದಿಯೊಳ್ ॥ ೮ ॥

ಉಡಲುಡೆಯಿಲ್ಲ ತಿನ್ನಲಿದೆಯಿಲ್ಲ ನಿಲಲ್ಕಡಿಯಿಲ್ಲ ನಾಡೊಳೇ ।
ನಡುವಿನೊಳಿಲ್ಲ ಪೊಕ್ಕನಡೆಯಿಲ್ಲೊಡನಾಡಿ[15]ಗಳಿಲ್ಲ ಬೇಡಲುಂ ॥
ಕೊಡರಹ ಸಾಲಮುಂ ಪೊಣೆಯುಮುಂ ಬಡವಂಗೆನೆ ಬಂದ ಕೇಡೊಳುಂ ।
ತೊಡೆವಪ್ರದೆಷ್ಟ[16]ಮುಂ ಮೊಗಕೆ ನಿಬ್ಬಣಮೆಂಬುದು ಯೌವನಾದಿಯೊಳ್ ॥ ೯ ॥

---

11. ಸಮ ವಯಸ್ಸಿನವರ ಸಂಗ. 12. ಮೊರೆಯು ಮೇಲೆ ಮೀರಿಯೊಡೆಯಿತು. 13. ಅಪೇಕ್ಷೆಯನ್ನು ಅಥವಾ ಪುರುಷಾರ್ಥವನ್ನು ತಿಳಿದುಕೊಳ್ಳಲಾರೆನು. 14. ಹೀನಪ್ರಕಾರದ ಕೆಲಸ. 15. ಮಿತ್ರರು. 16. ಸೊಬಗು ಬರುವುದು.

ಸಲ್ಲಿಗೆ ಪೂವಿಗುಂಟಸುಗೆ ಪಲ್ಲವಕುಂಟು ರಸಾಲ ಪಣ್ಣಿಗೈ ।
ಸೊಲ್ಲಿಗೆ ಕೀರಮಿಂಚರಕೆ ಕೋಗಿಲೆ ಬಣ್ಣಕೆ ಹಂಸಮಲ್ಲವೇ ॥
ಭಲ್ಲುಕ[17], ಕೇಶಕ್ಕೈಸೆ ಪುನುಂಗಿಗೆ ಮಾರ್ಜರ, ಗಂಧಕಾಮಿಗಂ[18] ।
ಬಲ್ಲವರಿಂತು ಬಯ್ತುಳಿದುದಂ[19] ಮದುಗೆಯ್ವರು[20] ಯೌವ
ನಾದಿಯೊಳ್ ॥ ೧೦ ॥

ಕಾರ್ಯದ[21] ಪಾರಮಾಚರಣ ದರ್ಪಣ ಮುನ್ನತ ಧರ್ಮ ದೀಪಕಂ ।
ಧೈರ್ಯದಯಾದಿ ಸದ್ಗುಣ ವಿವರ್ಧಕ ಮಿಂಗಿತ ಚಾರು ಚೇತಕಂ॥
ವೀರ್ಯವಚೋಭಿಮಾನರುಚಿ ಪೋಷಕ ವೈಹಿಕ ವಸ್ತು ಸಾರಮಾ ।
ಭಾರ್ಯೆಯ ಸಂಗಮೆಂದೆ ನವಳಂ ನಡೆ ನೋಡುತೆ ಯೌವ
ನಾದಿಯೊಳ್ ॥ ೧೧ ॥



17. ಕರಡಿ. 18. ಕಸ್ತೂರಿಮೃಗ. 19. ಉಳಿದುದೆಲ್ಲವನ್ನು ಬಿಟ್ಟುಕೊಟ್ಟು. 20. ಕೆಲವು ಕಾರಣಗಳ ಸಲುವಾಗಿಯೇ ಜೀವಾಜೀವ ಕೋಟಿಯೊಳಗಿನ ವಸ್ತುಗಳು ಖ್ಯಾತವಾಗಿರುವುವು; ಮತ್ತು ಮಾನವರಿಗೆ ಉಪಯುಕ್ತವಾಗಿರುವುವು. ಹಾಗೆಯೇ ಕಾಲಮಾನದಲ್ಲಿಯಾದರೂ ವಯೋವಸ್ಥೆಗಳು ಕೆಲವು ಉದ್ದೇಶಗಳಿಗಾಗಿಯೇ ಕ್ಲೃಪ್ತವಾಗಿರುವುವು. ಯೌವನಾವಸ್ಥೆಯು ಮದುವೆಗಾಗಿಯೇ ಎಂದು ನಿರ್ಧಾರವಾಗಿರುವುದು. 21. ಈ ಬಗೆಯುಳ್ಳಿಯೇ ಭಾರ್ಯೆಯ ಸಂಗವು ಪರಿಣಮಿಸುವ ಹಾಗೆ ಯೌವನ ಕಾಲದಲ್ಲಿ ಬಾಳಬೇಕಲ್ಲವೇ ?

## ೧೨.

### ಜಗನ್ನಾಥವಿರಚಿತ

# ಗಂಗಾಲಹರಿ.

## (ಕನ್ನಡ ಅನುವಾದ.)

[ಶಿಖರಿಣೀ ವೃತ್ತದ ಮೇಲೆ ನನ್ನ ಮಮತೆ ಬಹಳ. ಗಂಗಾಲಹರಿಯನ್ನು ಭಾಷಾಂತರಿಸಲಿಕ್ಕೆ ಅದೇ ಮುಖ್ಯ ಕಾರಣವಾಯಿತೆಂದರೂ ತಪ್ಪಾಗದು. ಅನೇಕರು ಗಂಗಾಲಹರಿಯ ನಿತ್ಯಪಠಣವನ್ನು ಮಾಡುವರು. ಅಂಥವರಿಗೆ ಈ ಕನ್ನಡ ಅನುವಾದವು ಉಪಯೋಗವಾಗಬಹುದು. ಸಮಶ್ಲೋಕದಲ್ಲಿಯೇ ಭಾಷಾನತರವಿರುವುದರಿಂದ ಕನ್ನಡ ಗಂಗಾಲಹರಿಯನ್ನಾದರೂ ಅವರು ಪಠಿಸಬಹುದು. ವೃತ್ತವು ಮೂಲತಃ ಕಠಿಣವಿರುವುದರಿಂದ ಈ ಅನುವಾದವು ತುಸ ಮಟ್ಟಿಗೆ ಕಠಿಣವೇ ಆಗಿರುವುದು; ಉಪಾಯವಿಲ್ಲ. ಕೆಲವೆಡೆಯಲ್ಲಿ ಮೂಲವು ಕಠಿಣವಾಗಿದ್ದು ಕನ್ನಡ ಅನುವಾದವು ಸುಲಭವಾಗಿರುತ್ತದೆ. ಸಾಧಾರಣವಾಗಿ ಎಲ್ಲ ಶ್ಲೋಕಗಳನ್ನೂ ನಾನು ಶಬ್ದಶಃ ಭಾಷಾಂತರಿಸಿರುವೆನು; ಅರ್ಥದಲ್ಲಿ ವ್ಯತ್ಯಾಸವಾದರೂ ಬಾರದಂತೆ ಎಚ್ಚರಪಟ್ಟಿರುವೆನು. ಕುಂದುಕೊರತೆಗಳನ್ನನುಲಕ್ಷಿಸದೆ ಈ ಕೃತಿಯನ್ನು ಕನ್ನಡಿಗರು ಸ್ವೀಕರಿಸುವರೆಂದು ನಾನು ನಂಬಿರುವೆನು.]

ಇದೇ ಭೂಸೌಭಾಗ್ಯಂ ಜಗದುದಯಲೀಲಾಕರ ಶಿವಂ- ।
ಗುದಗ್ರೈಶ್ವರ್ಯಂ ಮೇಣ್ಸಕಲಮಿದು ಶಾಸ್ತ್ರಾಗಮಗಳ ।
ಇದೇ ರೂಪಂಪೆತ್ತಿರ್ದ ಸುಮನಸರ ಸುಕೃತವೆಂದು[1] ಪೊಗಳ್ವ ।
ಸುಧಾಸಾರಂ ನಿನ್ನಾ ಜಲಮಳಿಸುಗೆಮ್ಮಶುಭಮುಮಂ[2] ॥ ೧ ॥
ದರಿದ್ರರ್ಗಾರಂ ದುರಿತವಹ ದುರ್ವಾಸನೆಗಳಂ[3] ।
ಕರಂ ನೋಡಲೊಂದೇ ಸಲಮೆ ಹರಿಪಂತಿರ್ಪ ಬಗೆಯೊಳ್ ॥

1. ಪುಣ್ಯ. 2. ನಾಶ ಮಾಡಲಿ. 3. ಆಶೆಗಳನ್ನು.

ವರೇಣ್ಯಂ ಮಾಯಾಭೂ[4]ರುಹವನುರೆ ನುಣ್ಚಾಳ್ಪ ಕೃತಿಯೊಳ್ ।
ಶರಣ್ಯಂ ನಿನ್ನಂಭಂ ಕುಡುಗೆ ಮುದಂ ಗೆಲ್ವಂ ಜಗದ್ಧೊಳು ॥ ೨ ॥
ಬಿಸಿಲ್ಮೈಲ್ಮೇರ್ವಂತೇ ಸ್ಫಟಿಕಪಟಮಂ ತ್ರ್ಯೋರ್ವಗಜ್ಜೆಯಾ ।
ಕು[5]ಶಾಗ್ರೇಕ್ಷ್ಮಾಪಾತಂ ಗತಿಗೆಡಿಸು ಪುರಾರಿಶಿರದ್ಧೊಳ್ ॥
ಭೃಶಂ ಗಂಗೇ ನಿನ್ನಂ ಕುದಿಸುತಿರೆ ನಿನ್ನೊ[6]ಳ್ತೆರೆಗಳೇ ।
ಅಶೇಷಂ ಪೂಳ್ಕೆಮ್ಮೊಳ್ ದುರಿತಭಯಮುಂ ವ್ಯಾಕುಲಿತೆರ್ಕೊಳ್ ॥ ೩ ॥
ಎಲೈ ತಾಯೇ ನಿನ್ನಾ[7]ಸರದೆ ಹೊರೆಚಲ್ವೆರ್ಬನಲಿ ನಾಕಂ ।
ನಿಲಿಂಪಗರ್ಬನ್ನೆತ್ತಂ ಸಲೆಯುಹೆನು ಭಾಗೀರಥಿಯೆ ಹಾಯ್ ॥
ವಿಲುಪ್ತಂ ನಾಲ್ನಪ್ಪಂ ಸಿರಿಕಿಪೊಡೆಯಸೌಧಾಸ್ಯದಲಿ ನೀಂ ।
ಘಿಲಾಘಪ್ರಸ್ತಾಪಂ ಸರಿಯುಹುದಗಾರಿಧ್ರಿರೊಳು ॥ ೪ ॥
ಸುಕೃತ್ಯಾಗೆಯ್ಯುಲ್ಘಗದನದನು ನಿನ್ನಂ ನೆನೆಯುಲಾ ।
ನಿಕೃಷ್ಟಂ ಗೀಪೆಯ್ನಿಂ ಬೆಳಕನಿಡುಳಂ ಪೊಯ್ವ ಸಸಿವೊಲ್ ॥
ಪ್ರಕಾಮಂ ಗೀರ್ವಾಣರ್ ಭಜಿಪ ಜಲರೂಪೇ ಕರುಣೆಯೆ ।
ನ್ನ ಕ[8]ಲ್ಪತ್ರೈತಾಪಂಗಳ ಕಳೆಯೆ ಪಾಪಂಗಳನು ಪೋಣ್ ॥ ೫ ॥
ತೃಣಂ ಸೈ ಪೇರ್ನಾಡೆಂದೆನುತದನು ಬೀಸಾಡಿ ನರರಾ ।
ಕ್ಷಣಂ ವಾನೀರಂಗಳ್ ಬೆಳೆದೆಸೆವ ನಿನ್ನಿರ್ಕೆಲಗಳಂ ॥
ಅ[9]ಣಂ ಸಾರುತ್ತೀಂಟಲ್ ಸುಧೆಯ ಪಳಿವಾ ನಿನ್ನ ಜಲಮಂ ।
ಕಣಾ ಕೀಳ್ಮಾಕ್ಕುಂ ಮೋಕ್ಷವನಪರ ಸಾನಂದಪದವ ॥ ೬ ॥
ನರೀಶಸ್ತ್ರೀವೃಂದಂ ನಸುಬೆಳಗಿನೊಳ್ಮಿಂದೊಡವರಾ ।
ಸುರವ್ಯೋರೋಜಾಗ್ರಂ ತಳೆದಿರುವ ಕಸ್ತೂರಿಕೆಯಂ ಸು ॥

---

4. ಮಾಯೆಯೆಂಬ ಗಿಡವನ್ನು ಕಡಿದು ಚೂರು ಮಾಡುವ. 5. ತೀಕ್ಷ್ಣ. 6. ಶುಭಕಾರಿಯಾದ ತೆರೆಗಳು. 7. ಆಶ್ರಯ. 8. ಪ್ರಬಲವಾದ. 9. ಸ್ವಲ್ಪ.

ತ್ವರಂ ನಿನ್ನಂ ಕೂಡಲ್ ಸುರವನದಿ ವೈಮಾನಿಕಚಮೂ ।
ಪರೀತಂಗಳ್ ಸ್ವೈರಂ ಪುಗುತಿಹುವು ಪೂತಾಂಗ ಮೃಗಗಳ್ ॥ ೭ ॥

ಮನ್, ಹಾ ! ತತ್ಕಾಲಂ ಸಮತೆಪಡೆಗುಂ ಜಾನಿಸಿದೊಡಂ ।
ಸುನಾಮೋಚ್ಚಾರಂ ಮೇಣ್ ಧುರಿತಭವ ತಾಪಂಗಳೆಗುಂ ॥
ಎನುತ್ತುಂ ಪೇಳ್ಬಲ್ಲ ಶ್ರವಣರುಚಿ ಗಂಗಾಪದಮದೇ ।
[10]ಸನಾತ್ರಿಕರ್ಣಾತ್ಮಾನನಗಳಲಿ ನೃತ್ಯಂಗೆಗಳುತೆ ॥ ೮ ॥

ಪರಾನಂದಾಲೋಲರ್ ವಿಹರಿಸುತೆ ನಿನ್ನೀರುತಲದೊಳ್ ।
ಸುರೇಶಾವಾಸಂ ಬೇಡೆನಲು ದುರುಳರ್ನಾರ್ಗವೆನಿಸೈ ॥
ಜರಾಜನ್ಮಾಂತಕ್ಲೇಶವನು ನೀ[11]ಯಿಂ ಕೀಳುವ ಮಹ- ।
ತ್ವರಂತೀರಂ ನಮ್ಮ ಶ್ರಮಶಮನಮುಂ ಗೆಯ್ವು ಮೆರೆಗೆ ॥ ೯ ॥

ಅವೇ ವೇದಂಗಳ್ ಜೇರ್ವಡದೆ ಪೊಗಳಲ್ ಪೊಣ್ಮದ[12] ತಿರುಳ್ ।
ಸುವಾಕ್ಸೂತ್ರಂಗಳ್ಗಂ ತಿಳಿಯಲನುವಿಲ್ಲೆಂಬ ಬಗೆ ತಾಂ ॥
[13]ಅವೇದ್ಯಾಂಗಂ ನಿತ್ಯಂ ನಿಜಮಹಿಮನಿರ್ವಾಸಿತತಮಂ ।
ಪವಿತ್ರಂ ತತ್ತ್ವಂ ನೀಂ ಸುರತಟನಿ ಜೇರೊಂದಿರುವುದೇ ॥ ೧೦ ॥

ವಿಶಾಲಧ್ಯಾನಾನೇಕವಿಧಕ್ರ*ತುದಾನಾಧಿಕಗಳಿಂ ।
ಅಸಾಧ್ಯಂ ತಾನೆಂಬಂತಿರುವ ಹರಿಪಾದಾಂಬುಜವ[14] ನಿ- ।
ಲ್ವಿಸಲ್ಕಾರುಂಟೇಂ ಪಾಸಟಿ ನಿನಗೆ ಸಾಮಾನ್ಯ ಜನಕೆ ॥ ೧೧ ॥

ಶುಭಾಂಗೆ ನಿನ್ನಂ ಕಾಣ್ಬೊಡನೆ ಭವದಳ್ಕಂ ಪರಿವುದೇ ।
ಪ್ರಭಾವಂ ಭೂಲೋಕಸ್ತುತಿಗಸದಳಂ ತೋರ್ಪುದದರಿಂ ॥

---

10. ಯಾವಾಗಲೂ. 11. ಸಮೀಪದಲ್ಲಿದ್ದ ಪಾತ್ರದ
12. ಮರ್ಮ. 13. ತಿಳಿಯಲಶಕ್ಯವಾದ ತನ್ನ ಮಹಿಮೆಯಿಂದ ಅಜ್ಞಾ
ನವನ್ನು ದೂರ ಮಾಡಿದ. 14. ನಿಲ್ಲಿಸಿ ಕೊಡಲಿಕ್ಕೆ.

[15]ಪ್ರಭೂತಾಮರ್ಷಮ್ಲಾನನಗಜೆಯು ಹಾರಯ್ಕೆ ಯೊಗೆದುಂ ।
ವಿಭೂತ ಶ್ರೀಕಂಠಂ ಮುಡಿದಿಹನು ನಿನ್ನಂ ಜಡೆಯೊಳು ॥ ೧೨ ॥
ಮತಿಭ್ರಾಂತರ್ ಹೀಯಾಳಿಸುವ ಪತಿತರ್ ಹಿಂಜರಿಯುವ ।
ವ್ರತಃಪೂತರ್ ಮಾತಾಡದ ಪಿಸುನಿಗಳ್ ಬೆರ್ಚಿ ಬಿಗು*ರ್ವಾರ್- ॥
[16]ಶ್ರಿತಪ್ರಾಣಿಕ್ಷುದ್ರಂಗಳನೆನಸುಮುಜ್ಝುತ್ತಮನಿಶಂ ।
ನಿತಾಂತಾಶ್ರಾಂತಾಂಬೇ ವಿಜಯಿಸುವೆ ನೀನೋರ್ವಳೆ ಭಲೆ ॥ ೧೩ ॥
[17]ಇಲಾಲೋಕವ್ಯಾಪ್ತಾರ್ತಿಹರಣಕೆ ಸಾಕಂ ಜಿಡಲುಮು- ।
ನ್ನಲೋಭಂ ಮಾಡೇವಂ ಜಡೆನಡುವೆ ನಿನ್ನಂ ಬಿಗಿದನೈ ॥
[18]ಕಲಂಕಂ ನಿನ್ನೊಳ್ತೋರಿದುದು ಗುಣಕೋಶಾಂತರಗತಂ ।
ವಿಲೋಭರ್ ಲೋಭಕ್ಕಾಸ್ಪದ ಗೊಡುವರೇನೆಂಬುದಿದಕೆ ॥ ೧೪ ॥
ಜಡಂ ಮೂಕಂ ಕುಂಟಂ ಜನುಮಗಿವ್ರಡಂ ಕಣ್ಣಿರದವಂ ।
[19]ತೊಡರ್ದಾರಾಗಲ್ಬಾರದ ದುರಿತದೊಳ್ ಜಾರಿದ ನರಂ ॥
ಮೃಡಾದಿತ್ಯಕ್ತಂ ಮೇಣ್ ನರಕ ನಿಲಯಂ ದುರ್ಗ್ರಹವಶಂ ।
ಬಿಡಂ ನಿನ್ನಂ ಮಾತೇ ದುರಿತಧವನ್ನೈಕೌಷಧೆಯುಳಂ ॥ ೧೫ ॥
ಪೊದಲ್ದೊಂಡು[20]ಣ್ಮಿರ್ದೇರುಕುಳಿರನೂಡಂಗೊಂಡ ತಿಳಿಯಂ ।
ಪೊದಳ್ದೀ ಪಾನೀಯಂ ಪಡೆದ ಪೆಸರೀಳ್ಗಂ[21] ಜಗದೊಳಾ ॥
[22]ಮುದಂ ಪಾಡುತ್ತಿರ್ಪರ್ ಸಗರಜರು ರೋಮಾಂಚಿತರವರ್ ।
ಪಿದಿಃಸ್ತ್ರೋಂಗಸ್ಸ್ವರ್ಗಂ ಪಡೆದು ಗಡ ನಿನ್ನೀ ಜಲವನೇ । ೧೬ ॥

---

15. ಅತಿಶಯ ಮತ್ಸರದಿಂದ ಬಾಡಿದ ಪಾರ್ವತಿಯು. 16. ಆಶ್ರಿತ ಪ್ರಾಣಿಗಳ ಪಾಪಗಳೆಲ್ಲವನ್ನೂ ತೊಳೆಯುತ್ತ. 17. ಭೂಮಿಯನ್ನು ವ್ಯಾಪಿಸಿದ ದುಃಖವನ್ನು ಕಳೆಯುವುದಕ್ಕೆ. 18. ನಿನ್ನ ಗುಣ ಸಮೂಹದಲ್ಲಿ ಕಲಂಕವು ತೋರಿತು. 19. ಸಂಪರ್ಕವು ಹೋಗದ. 20. ಹೆಚ್ಚಾದ ತಂಪನ್ನೂ ತಿಳಿಯನ್ನೂ. 21. ವಿಖ್ಯಾತವಾಗುತ್ತಿದೆ. 22. ಆನಂದದಿಂದ.

[23] ಇನಿತ್ತಿಷ್ಟೇ ತಪ್ಪಂ ಭರದಿ ಲಘುಸಂತಾಪಗಳನುಂ ।
ವಿನಾಶಂಮಾಳ್ಪಂತೋ ವಿವಿಧ ಜಲತೀರ್ಥಂಗಳಿಹವೈ ॥
ಅನೇಕ ಪ್ರಾಯಶ್ಚಿತ್ತಬಹಿತ ದುರಾಚಾರದಶರಂ ।
ವಿನಾ ನಿನ್ನಂ ಗಂಗೇ ಪರಿಹರಿಪರುಂಟೇ ತ್ರಿಜಗದೊಳ್ ॥ ೧೭ ॥
ಸುಧರ್ಮಾಗಾರಂ ನವಮುದಕೆ ಬೇರೊಂದು ತೆರವೈ ।
ಪ್ರಧಾನಂ ತೀರ್ಥಂಗಳ್ಗಮಲ ಪರಧಾನಂ ತ್ರಿಜಗಕೆ ॥
ದ್ವಿಧಾಜಾತಜ್ಞಾನಕ್ಕುಪಶಮನಮಜ್ಞಾನಕುಲಿಶಂ[24] ।
[25] ಸುಧೇ ನಿನ್ನ ಶ್ರೀದಾಯಿತನು ತರಗೆವ್ಯಾರ್ತಿಯನು ತಾಂ ॥ ೧೮ ॥
ಧನೋನ್ಮತ್ತೋರ್ವೀಪಾಲಕರಿದಿರೊಳ್ವೋಡಿ ಪೊಸತೆಂ[26] ।
ಬನೇಕ ಕ್ಲೇಶಂಗಳ್ಗೆಡೆಯುಹೆನು ಮತ್ತಂ ಸ್ವಹಿತಮಂ ॥
[27] ವಿನಷ್ಟಂ ಪಾಳ್ಗೆಯ್ದಂ ಬಿಟಮಿದು ಮಹಾದೋಷಮೆನಿಕಂ ।
ವಿನೀತೆ ನಿನ್ನಂತಃಕರಣವನು ನಾನಿನ್ನು ತೊರೆಯೆಂ ॥ ೧೯ ॥
ಸಮೀರಂ ಸೂಸಲ್ ನೀಂ ಪುಳುಕಿಸೆ ಸರೋಜಂಗಳನಸಂ[28] ।
ಸಮೀರ್ಣ ಕ್ಷಾಂ ಪೂದೊಳ್ಗಿದೊಡೆ ಕೆಂಪೇರಿ ಮಿಸುಪಾ ॥
ಪ್ರಮಾರ್ಜದ್ವೇಷಸ್ತ್ರೀ ಕುಚಭರದ ಗಂಧಾಗರುದಿದುರ್ಗಂ ।
[29] ಸ್ನಮಾಲಿನ್ಯಂಗೊಂಡೀ ಜಲವುರಿಯಲೆನ್ನಾತ್ಮದಲಂ[30] ॥ ೨೦ ॥
ಸಮುತ್ಪತ್ತಿ ಶ್ರೀಕಾಂತನ ಪದವನೇಜಾಮುಲನಖಂ ।
[31] ಸುಮಾಸ್ತ್ರಾರೀಶಂ ನೆಯ್ದೊಗೆದ ಜಡೆ ನೀನಿರ್ಪ ಭವನಂ ॥

---

23. ಅಷ್ಟಿಷ್ಟು ಅಂದರೆ ಕ್ಷುಲ್ಲಕವಾದ. 24. ವಜ್ರಾಯುಧ. 25. ಅಮೃತೋಪಮಳೇ ನಿನ್ನ ಶುಭಕರವಾದ ಶರೀರವು (ನೀರು) ನವು ದುಃಖವನ್ನು ನಾಶಪಡಿಸಲಿ. 26. ಎಷ್ಟೋ ಹೊಸ ಹೊಸ ದುಃಖಗಳಿ ಕುಶ್ತಾದೆನು. 27. ಹಾಳಾದ ನಾನು ನನ್ನ ಕಲ್ಯಾಣವನ್ನು ಹಾಳಗೆಡ ದೆನು. 28. ರೋಮಾಂಚವೆದ್ದಂತೆ ನಿನ್ನ ತೆರೆಗಳು ಏಳುತ್ತಿರಲಾಗಿ 29. ಶುಭಕರವಾದ ಮಲಿನತೆಯನ್ನು. 30. ಉರಲನ್ನು. 31. ಈಶ್ವರ

ಶ್ರಮಮಂ ಸಾಜಂ ತತ್ಕಾರಣಮೆ [32]ಖಲನಿಸ್ತಾರಣತೆಯೊಳ್ ।
ಸುಮಾನ್ಯೇ ಹೀಗಿದರ್ಗಂ ಮೆರೆಯುದಿಹುದೇಕೌಮುಹಿಮೆತಾಂ ॥ ೨೧ ॥
ನ[33]ಗದ್ವಾರಂ ಬಂದಾ ನದಿಗಳೊಳೆಸಿತ್ತೈ ಶಿವಜಟಾ- ।
ನಘಪ್ರದೇಶಂಗಳ್ಗೆ[34]ಸಕವಹವಿನ್ನೇಸು ಹರಿಯಾ ॥
ದೃ[35]ಗಪ್ರಾಪ್ಯಂ ಪಾದಾಬ್ಜವನೆ ಗಡ ಪೇಳೌ ತೋಳಿವ್ರವ್ಯೆ ।
ಜಗನ್ಮಾತ್ರೇ ನಿನ್ನಂ ನುತಿಪರದಕೆಂದೇ ಸುಕವಿಗಳ್ ॥ ೨೨ ॥
ಸಮಾಧಿಸ್ಥಂ ಬ್ರಹ್ಮಂ ತಪಮನೊಡರುತ್ತಿರ್ಕೆ ಹರಿಯುಂ ।
ಸಮಾನಂದಾತ್ಮಂ ತಾಂ ಪವಡಿಸುಗೆ ಸಾಂಬಂ [36]ಕೊಣಕುಗೆ ॥
ಭ್ರಮಂ ಪ್ರಾಯಶ್ಚಿತ್ತಂ ಯಮಯಜನ ದಾನಂಗಳವು ಸಾ- ।
ಕಪೋಘಂ ನಮ್ಮಾಶಾಕುಲವ [37]ನೆರೆಪಳ್ಳಿಂ ಬಳಿಗಿರಲ್ ॥ ೨೩ ॥
ಅನಾಥಂ ಪ್ರೇಮಾಲು ಸ್ಖಲಿತಚರಿತಂ ಪುಣ್ಯಗತಿಪೇ ।
ಅ[38]ನರ್ಥಂ ವಿಶ್ವೋದ್ಧಾರಳೆ ಬಳಲಿದಂ ವೈದ್ಯರರಸಿ ॥
ಗನಂ ನಾಂ ಬಾಯಾರಿದರ್ಭಕನು ಪೀಯೂಷನಿಧಿಯೇ ।
ಸ[39]ಸೀಯುಂ ಬಂದೆಂ ನೀಂ ಪೊರೆವುದದು ಸಲ್ಗುಂ ಬವಣೆಯಿಂ ॥ ೨೪ ॥
ಒ[40]ಡಂಗೊಂಡಿರ್ದೈತಪ್ಪುದು ಜವನ ದೇಸಾಬರ್ಟೆಯು ಮ- ।
ತ್ರೆ[41]ಡಾ ಪೋದರ್ ಪೆರನೆಲಪುನಿನ್ನಾರನರಸಲ್ ॥

---

32. ಪಾಪಹರಣ ಮಾಡುವುದರಲ್ಲಿ. 33. ಪರ್ವತದಿಂದ. 34. ಭೂಷಣವಾಗಿರುವವು. 35. ನೋಡಲಿಕ್ಕೂ ದೊರೆಯದ. 36. ಕುಣಿಯಲಿ. 37. ಸಿದ್ಧಿಗೊಯ್ಯುವವಳು. 38. ಪುರುಷಾರ್ಥರಹಿತನು. 39. ಸಮೀಪಕ್ಕೆ ಬಂದಿರುವೆನು. 40. ಕ್ಷೀಣವಾಗುತ್ತ ಬರುವವನು. 41. ಕೂಡಲೇ ಜೀರಿಯುವರನ್ನು ಹುಡುಕಲಿಕ್ಕೆ ಬೇರೆ ಕಡೆಗೆ ಯಮನ ದೂತರು ಹೊದರು.

[42] ದುಡುಂಕುತ್ತುಂ [43] ಬರ್ದಿಲ್ಪತದಿ [44] ನಡೆವಾಡಂಗಳಿವೆ ನೀಂ ।
[45] ಕಡಂಗೀ ಲೋಕಕ್ಕೈದಿಸಲು ಸರಸಾಯ್ತೀ ಪೊಸತೆರಂ ॥ ೨೫ ॥
[46] ಅಳುವಾರ್ಗರುಂ ಕೀಳ್ಗೆಯ್ತ್ತದ ಪಗೆಗಳಿಂ ಪೊತ್ತಿದುರಿಯಿಂ ।
ತ್ರೊಳಲ್ವುಂ ಬೆಂಡಾದೀಯೊಡಲ ಪರಿತಾಪಂಗಳಳವಂ ॥
[47] ಪಳಂಚಾಡಲ್ವೇಳ್ಕುಂ ಸುರನದಿಯೆ ನಿನ್ನಕೂರ್ಣವ ಜಲಂ ।
ವಿಲಾಸೋಲ್ಲಾಸಂ ವಾಯುಚಲಿಪಲೆಯುಂ ನೀರ್ಕಣಗಳುಂ ॥ ೨೬ ॥
ಇದೇ ಈ ಬ್ರಹ್ಮಾಂಡಂ ಸಕಲ ಜಗದಾ ಭೋಗ ದೆಸೆಯಿ- ।
ರ್ದೇ ಈ ನಿನ್ನೊಳ್ [48] ತಿಂದುಕದ ತೆರನಿಂಗುಂ ಲುಠಿಪುದೆಂ- ॥
ಬುದಾರಕ್ರೀಯುಂ ಸಲ್ಗು ಮೆನೆ ಶಿವ ನಾಸಂತ ಜಟೆಯೊಳ್ ।
ಸದಾ ಘೋಘೋರ್ಗೀಶಿಂಬೀ ಜಲ [49] ಮುಳ್ಳ್ಗೆಯೀ* ಮೂಜುರಿಗಳಂ ॥ ೨೭ ॥
ಅಹೋ ಕಷ್ಟಂ ನಾಣ್ಚುತ್ತಿರುಪಖಿಲ ತೀರ್ಥಂಗಳಿನಗೀ ।
[50] ಬೃಹದ್ದೋಷಂಗುದ್ಧಾರಮನೆಸಗಲೀನೆಂಬಿ ಜಗದೊಳ್ ॥
ಮಹೇಶ [51] ಪ್ರಾಮುಖ್ಯರ್ ಕೊಡಕೆಂಯೊಳು ಕೆಯ್ಗೊಯ್ಯುರಿವನಂ ।
ಸಹಾಸ್ಯಂ [52] ನಿಷ್ಪ್ರಪಂನೆಗಳ್ಪು* ಹರಗರ್ಗ್ಗನುಚರಾ ॥ ೨೮ ॥
[53] ಶ್ವಪಾಕ ವ್ರಾತಂಗಳ್ ಪರಿಪರಿಯೊಳಂ ನೋಡಿ ಜರೆದಾ ।
[54] ವಿಪಾಕೈನಂಗಳ್ಗೀರ್ಮನೆಂಯೆನಿಸಿ ಬಾಳ್ವಂ ದುರುಳನೀ ::

---

42. ದಟ್ಟವಾಗಿ. 43. ಸ್ವರ್ಗದ ದಾರಿ. 44. ವಿಮಾನ. 45. ಪ್ರೇಮದಿಂದ. 46. ಹಬ್ಬಿಕೊಂಡ ಕಾಮಾದಿ ಷಡ್ರಿಪುಗಳಿಂದ. 47. ಹೊಡೆದು ಹಾಕಲಿಕ್ಕೆ ಬೇಕು. 48. ಒಂದು ತರದ ಕಾಯಿ. 49. ಶಾಂತ ಮಾಡಲಿ. 50. ಮಹಾಪಾಪಿಯಾದ ನನಗೆ. 51. ಶಿವ. 52. ನಿಷ್ಪಾಪನನ್ನು ಮಾಡಿ ಪಾಪವನ್ನು ತೊಳೆಯಬಲ್ಲ ದೇವರಿಗೆಲ್ಲ ನಾಚಿಕೆ ಬರುವಂತೆ ಮಾಡಿ ಮಾತಾಡಿ ತೋರಿಸು. 53. ಚಾಂಡಾಲರ ಸಮೂಹಗಳು. 54. ಪಾಪಾದಿಗಳಿಗೆಲ್ಲ ಆಶ್ರಯನೆನಿಸಿದ.

ವಿಪನ್ನಂಗುದ್ಧಾರಂ ಬಗೆಯಲುಡೆ ಕಟ್ಟೆರ್ದ ಕತದಿಂ ।
ಪ್ರಪೂರ್ಣಂ ನಿನ್ನಾರ್ಪಂ[55] ಪೊಗಳಲದನೇಂ ಗಾಂಪನ[56]ಳವೇ ॥ ೨೯ ॥
ಮೊದಲ್ಗೊಂಡಿನ್ನುಂ ನಾಂ ದುರಿತ ಕೃತಿಯಂ ಕಾಣೆನವನಂ ।
ಪೊದಳ್ದಿತ್ತುತ್ತಂ ಲೋಗವಸತರೆ ನೋಂಕೆಂ[57] ಬೆಗಡಿನೊಳ್ ॥
ಇದೇಂ ದೈವಂ ಪೇಳೆಂದುಳಿದ ಪಸಮಿನ್ನುಂ[58] ಬಿಡದಿರ್ದೈ- ।
ದಿದಂ ನೀಚಂ ಪಾಳ್ದೇಸಿಗನಿವಗೆ ಕೂರ್ಪಂ[59] ಸಿರವಿಸೇ ॥ ೩೦ ॥
ಸ್ವವೃತ್ತಿಪ್ರೇಮಂ[60] ಮೇಣುರದೆ ತೊದಳ್ನಾಡುವೆರಕಂ[60] ।
ಸುವಿಜ್ಞಾನಂ[61] ಕೀಳ್ಪ್ರವರ್ದರೊಳನಿಶಂ ಚಾಡಿಗಳಪುಂ[61] ॥
ಇವೆಲ್ಲಂ ಕೇಳೆನ್ನಾಟಮಿವಿನಿತು[62] ಮಲ್ಲುಂಟೆನಿತೊ ಕಾಣ್ ।
ತವತ್ರಾರ್ಣಯೋ[63] ನೀನಲ್ಲದೆ ಮೊಗವನಾನೋರ್ಗಳ್ಪರೆನತಂ ॥ ೩೧ ॥
ಮನೋಜ್ಞಾಪೂರಂ[64] ತಾನೆಸೆಸಣಿಯರೂಪಂ[64] ತಣಿಸು ಪೀ- ।
ರನಾತಂಗಿರ್ದೇಂ ಕಣ್ಣೆನಿತುಮದು ತೋರಾದೊಡಮೆಯೇಂ[65] ॥
ಪೊನಲ್ಮೀರಿಂಬಾಗೇಳಿಪ ತೆರೆಯ ಚೆನ್ನಾಟದುಲಿಯಾ ।
ವಿನಿತ್ತುಂ ಕೇಳ್ದಿಲ್ಲಾನರರಗಿದು ಸಿಗ್ಗಲ್ತೆ[66] ಸುಭಗೆ ॥ ೩೨ ॥

---

55. ಸಾಮರ್ಥ್ಯ. 56. ಮೂಢ. 57. ಆಶ್ಚರ್ಯಚಕಿತನಾಗುವಂತೆ ಮಾಡದಾಗಿರುವೆನು. 58. ಅಪೇಕ್ಷೆ. 59. ಪ್ರೇಮವನ್ನು ಕೊಡು. 60. ಸೇವೆಯ ಪ್ರೀತಿ...... ಸುಳ್ಳು ಮಾತಿನ ಪ್ರೀತಿ 61. ಸುವಿಚಾರ....... ಚಾಡಿಯ ಮಾತು. 62. ಇಷ್ಟೇ ಅಲ್ಲದೆ ಇನ್ನೂ ಎಷ್ಟೋ ಉಂಟು. 63. ಮಹಾಮಾತೆ. 64. ಒಳ್ಳೇ ಮನೋಹರವಾದ...... ಬಲಿಷ್ಠವಾದ ರೂಪವನ್ನು. 65. ದೊಡ್ಡದಾದರೇನು ಫಲ. 66. ನಾಚಿಕೆ.

ಅಧರ್ಮಿಗೀ ವ್ರಾತ್ಯಂ ನಾಸ್ತಿಕನಥವ ದುರ್ನೀತರಿವರಂ ।
ಸುಧೀರೆ ಆರ್ಯೆಪಳ್ಕರಿನ ನಡೆ ನಿನ್ನೊಳ್ಕಿಡದು ಪೇಳ್ ॥
ಸುಧಾಸಾಮ್ಯೇ ಎನ್ನೊಳ್ದುರಿತತತಿಯಾಟಂ ಕೊರಗದೈ ।
ವಿಧಿಪ್ರಾಪ್ತಂ ಸ್ವಾಭಾವಮೆ ಬಿಡದು ಸ್ವೈಯೆಂಬೆನಿಳೆಯೊಳ್ ॥೩೭॥
ನಟೇಶಂ ಸಾಯಂಕಾಲದಿ ಕುಣಿವ ಸಂರಂಭದಲಿ ನೀಂ ।
ಜಟಾಜೂಟಾಭೋಗಾಂತರದಿ ತೆರೆಯಿಂ[77] ನರ್ತಿಪನುವೊಳ್ ॥
ಜಟಾಕೂಲಕ್ರೋಡೋಜ್ಜ್ವಲಡಮರುಡಂಕಾರವೊಳಗಲ್ ।
ಘಟಂ ನಿನ್ನ ಕ್ರೀಡಾವಿಧಿ ತುಳಿಗೆ ಸಂತಾಪಭವಮಂ । ೩೮ ॥
ನಿರಂತಂ ನಿನ್ನಂ ಕೂಡಿಹುದು ಮಮ ಕಲ್ಯಾಣಮನಿತುಂ ।
[78]ನಿರಾಕಾರಂಗೆಯ್ದೊಂದೊಡನೆನಗುಮೀ ದಂದುಗದಿ ಕಾ– ॥
ತುರಂ ನಿನ್ನಂ ನಂಬಂ ತ್ರಿಭುವನದೊಳೊರ್ವಂ ಜನನಿಯೇ ।
ನಿರಾಧಾರಂ ನಿನ್ನಾ [79]ಕವಡಳಿವ ಕಾರುಣ್ಯಮಹುದೌ ॥ ೩೯ ॥
ಭವಾನಿ ಶ್ರೀಕಂಠಂಗೊರಗಲವಳಾ ಬೈತಲೆಡೆಯೊಳ್ ।
[80]ಶಿವಾಂಗ್ರೋಲ್ಲಾಸೇ ನಿನ್ನುರುತರತರಂಗಾಳಿಯುರುಳೆ ॥
ಜನಂ ನಿನ್ನೊಳ್ ಸಾಪತ್ನ್ಯದಿ ಕೆರಳ್ದು ಕಣ್ಣಿಟ್ಟು ಭವೆ ತಾಂ ।
ಸವರ್ಣಳ್ ಜೈಯಿಂದೆಂಬುರುಲಹರಿಗಳ್ [81]ದೇಸೆವಡೆಗೆ ॥ ೪೦ ॥
ಅನೇಕರ್ನಿನ್ನಂ ಸಾರ್ವರಿದಕಹುದೊಂದೇ [82]ಕತವು ಕಾ– ।
ಮನಾ ಸಂಪೂರ್ತ್ಯರ್ತಾರ್ಣವಹರದೆ ನಿನ್ನಿಂದೆ ಕರುಣೆ ॥
ಮನಂಮುಟ್ಟಿಂ ಪೇಳ್ವೆಂ ತಳೆದಿಹುದಿದೆನ್ನಾತ್ಮಸುರಿಯೌ ।
ಘನಪ್ರಾತ್ಯೇ ಪ್ರಟ್ಟಂಗುಣಮೆನುವವ್ರೊಲ್ನಿನ್ನೆರಕಮಂ[83] । ೪೧ ॥

---

77. ತೆರೆಗಳನ್ನೊಡಗೊಂಡು. 78. ಬಿಟ್ಟುಕೊಟ್ಟರೆ. 79. ನಿಷ್ಕಪಟವಾದ. 80. ಶಿವನ ತಲೆಯ ಮೇಲೆ ವಿಲಾಸ ಮಾಡುವವಳೇ. 81. ಶೋಭೆಯನ್ನು ಪಡೆಯಲಿ. 82. ಕಾರಣವು. 83. ಪ್ರೇಮವನ್ನು.

ನರರ್ನಿನ್ನಾ ಮಣ್ಣಂ ಪಣೆಯೋಳಿಡೆ ಸಲ್ಲೀಲೆಯೊಳಿದೇಂ ।
ಪುರಾಜತ್ ಸೂರ್ಯಂ ಶಾಂ ತಮವಡಗಿಪಂತ್ರೈದೆ ನೆಗಳ್ದಂ ॥
ಭರಂ ಬೊಮ್ಮಂ ತೀಡರ್ದಳಿಬರಹಮಂ ಸಾರಿಸುವುದಾ – ।
ದ್ದರಿಂದೆನ್ನಿಲ್ಲಾ ದೋಷವನರಿಗೆ ತನ್ಮೃತ್ತಿಕೆ ಪಲಂ । ೪೨ ॥

ಇದೇ ನಮ್ಮೀ ದೇಸಂ ತೊಲಗೆವದನೆಂಬಾ ಜನಗಳಂ ।
ಪೊದಳ್ದಂ ಪೂದೊಂಗಲ್ಸಿವದಿ [84] ನೆರೆನಕ್ಕುಕ್ಕುತಲೆಗಂ– ।
ಧದಿಂವಾಲಿಸ್ಯಂ ತವೊಮ್ಮೆಳಿರೆನರಂ ನಿರ್ಮಲಿನರಂ ।
ಸದಾ ವಾಳ್ಪಂತಿರ್ಮೇಗಿರೆಯು ಮರಗಳಿಕೆರ್ನಮ್ಮ ಬಳಗಂ ॥ ೪೩ ॥

ಕೆಲಬೇ[85]ರ್ಳ್ವಬರ್ದಿರ್ಲ್ಲರಿಗೆ ಕೆಲಬರ್ಸೇವೆಯೆಸುವರ್ ।
ಪಲರ್ಯಾಗಾರಕ್ತರ್ಯರ್ಮುನಿಯುಮುದಾಭಕ್ತರೆನಿಬರ್ ॥
ಪೊ[86]ಲಂಬಿಂತುಂ ಬಿಟ್ಟಾಂ ಮನದಿ ತವ ಸಂಕೀರ್ತನರತಂ ।
ವಿ[87]ಲೋಕಿಪ್ಪೆಂ ಪುಲ್ಲಿಂದಿದೆ ತೊಡಕ ನಾಂ ತಾಯೆ ಸಲಸಾ । ೪೪ ॥

ಅತೀವಾಯಾಸಂಗೊಂಡಿರುವ ಪೇಗಂ ಸೈ[88]ಸನಿಪಿಸಲ್ ।
ಕೃತಾರ್ಥ ಕ್ರಿಯರ್ಸೈ ಯೆನಿಸಲಿಹುಸೀಸೋ ಸುರವರರ್ ॥
ಗ[89]ತಾಧಾರರ್ಗೆಂತಾನು ಪೊಳೆತನೆ ಗೆಯ್ದಿಲ್ಲದವರೊಳ್ ।
ಹಿತಂಮಾಳ್ಪರ್ಜೇರಿಲ್ಲಿದು ಪುಸಿಯೆ ನೀಸಿಲ್ಲದಿಳೆಯೊಳ್ ॥ ೪೫ ॥
ಜಗಜ್ಜೀವೆ ನಿನ್ನಾಪವ ಕುಡಿದು ನಿನ್ನೋರಿಯೊಳ್ ನಾ– ।
ವುಗಳ್ಳ್ಮೃಥರ್ ಪೋಳ್ಳೆಸಿರವಿಸಿದೆ ಪೈ[90]ಪತ್ತುವಿಡವೆ– ॥

---

೮೪. ಹೂವಿನ ಗುಂಪಿನ ರೂಪದಿಂದ ಚೆನ್ನಾಗಿ ತಿರಸ್ಕಾರ ಮಾಡು...
ವಂತೆ ನಕ್ಕು ಸೊಕ್ಕಿ ತಾವೇ ಮಲಿನಾಂಗವುಳ್ಳವಾದರೂ ಜನರನ್ನು ಪಾಪ...
ಹಿತವಾಗಿ ಮಾಡುವಂತೆ ನಿನ್ನ ಇಬ್ಬದಿಯ ಗಿಡಗಳಿರಲಿ. ೮೫. ಯಜ್ಞ...
ಮಾಡುವರು. ೮೬. ಈ ಎಲ್ಲ ಮಾರ್ಗಗಳನ್ನು. ೮೭. ಈ ಸಂಸಾರಲಂ...
ಪಟವನ್ನು ಹುಲ್ಲಿನಂತೆ ತುಚ್ಛವೆಂದು ತಿಳಿಯುವೆನು. ೮೮. ಸಂಗ್ರಹಿಸ...
ಲಾಗಿ. ೮೯. ಏನಾದರೂ ಪುಣ್ಯವನ್ನು ಮಾಡದಿದ್ದವರು. ೯೦. ಒಂದೇ...
ಸಮವಾಗಿ.

ಗ್ರುಗಣ್ಯೇ ನಿನ್ನುತ್ಸಂಗದೊಳನಿಲ ಶೈತ್ಯಾನ್ವಿತಿದೊಳಾ- ।
ವಗಂ ಕಾರುಣ್ಯಾಧಾರಳೆ ಮಲಗಿಸೆನ್ನಂ ಬೆಸನಿಯುಂ ॥ ೪೬ ॥
ಕರಂಕಟ್ಟಾ ನಿನ್ನಾ ಚೆಲುವ ನಡುವಂ ನೆಟ್ಟನೆ ಜಟಾ ।
ಕಿರೀಟಾಂತರ್ವರ್ತಂ ಶಿಶುಶಶಿಯು ಚೆನ್ನಾಗಿ ಬಿಗಿಯಲ್ ॥
ನಿರಂತಂ ನೀಂ ತಾತ್ಸಾರವನಳಿಸು[91] ಸಾಧಾರಣರೊಳೀ ।
ನತಂ ತಾನಲ್ಲೇರ್ವಂ ಕರುಣಿಸು ಜಗನ್ನಾಥನವನಂ ॥ ೪೭ ॥
[92]ಜಯೇಂದು ಪ್ರಾಕಾಶೇ ಶಶಿಶಕಲ ಭಾಸ್ವನ್ಮುಕುಟಿಸೇ ।
[93]ಭಯಾಂತಾಂಭೋಜಾತೇಷ್ಟವರ ಘಟಸಂಶೋಭಿತಕರೇ ॥
[94]ಪಯಃ ಪೀಯೂಷಾಸಾರಸರಣಿ ಸುಲೇಖಾವಸನಸೈ ।
ಮಯೀ ನಿನ್ನಂ ಚಿಂತಿಪ್ಪರಿಗೆ ಕೆಡಕೆಂದುಂ ಬರದು ಕೇಳ್ ॥ ೪೮ ॥
ಮುಗುಳ್ನಗೆಯುನುಣ್ಮುವಾನನದ ಕಾಂತಿಪೀಯೂಷದಿಂ ।
ಭುಗಿಟ್ಟು ಭವಕಿಚ್ಚಿನೊಳ್ಸುಡುವರಂ [95]ಬಲಂಗೆಯ್ವಳೇ ॥
[96]ಬಿಗುರ್ವಡೆದ ಚಿನ್ಮಯೇಂದು ರುಚಿರಾಂಚಿತಾಂಗಾಂಗನೇ ।
ಅಘಾರಿಯೆನಗೊಳ್ಳಿತಂಕುಡೆಲೆ ಗಂಗೆ ಸನ್ಮಂಗಳೆ ॥ ೪೯ ।
ದೇವವ್ರಾತಭಯುಂ ಜಿತೌಷಧಬಲಂ ಮಂತ್ರಾಂಗಳಾಘಾತಕಂ ।
[97]ಸಂವೀತಾಮೃತಜೀವಿತಂ ಮರಕತಗ್ರಾವಾದಿದುರ್ವಾರಿತಂ ॥
[98]ಭಾವಜ್ವಲಿಯು ಘೋರತಾಪವಿದರಿಂ [99]ದೂರೈಸೆಯೆನ್ನಂಜನಂ ।
ನೀಂ ವೈಕುಂಠನ ಪಾದಮಂತೊಳೆಸಳೇ ಸ್ವರ್ಲೋಕಕಲ್ಲೋಲಿನಿ ೫೦॥

---

91. ಹೋಗಲಾಡಿಸು 92. ಬಳೆಯುತ್ತಿರುವ ಚಂದ್ರ. 93. ಅಭಯ, ಕಮಲ, ವರ, ಘಟ. 94. ಅಮೃತದಂತಿರುವ ನೀರಿನ ಪ್ರವಾಹದ ತೆರೆಗಳ ಸುಂದರ ವಸ್ತ್ರದ ಕಾಂತಿಯುಳ್ಳವಳೇ. 95. ಬಲಿಷ್ಠರನ್ನಾಗಿ ಮಾಡುವವಳೇ. 96. ಆಶ್ಚರ್ಯಯುಕ್ತವಾಗಿ ಚಿನ್ಮಯ ಚಂದ್ರನ ಸೌಂದರ್ಯಶೋಭಿತಳಾದವಳೇ. 67. ಅಮೃತದ ಸ್ವಾರಸ್ಯವನ್ನು ಸೆಳೆದುಕೊಂಡುದು. 98. ಸಂಸ್ಕಾರಕ್ಕೆ ಸಂಬಂಧಪಟ್ಟ. 99. ದೂರ ಇರಿಸು.

[100]ಎನ್ನೊಳ್ಸೋತಂ ದ್ವಿಪೇಂದ್ರತ್ವಚಮನನು ಚರಶ್ರೇಣಿ ನಂದಿಂ
ದುಮಂ ಮ-
ತ್ತಿನ್ನೇವೆಳ್ಪಿಂ ಶಿವಂ ತನ್ನನೆ ಪಣವಿಡುವಂ ತಂಗಿಯೆನ್ನುತ್ತೆನಿನ್ನ
ಮುನ್ನಂ ಶರ್ವಾಣಿ[101] ಸಾರ್ಥಂ ನಿರುಕಿಸೆ ಮೃದುಲ ಸ್ಮೇರಮಂ
ದೋರಿಸುತ್ತೆ
ನಿನ್ನೊಳ್ಪೆಳ್ಪೆತ್ತು ಹಾರುತ್ತಿಹ ಲಹರಿಗಳಾ ತಾಂಡವಂ ನೇರ್ಪು
ಗೆಯ್ಗೆ[102] ॥ ೫೧
ಸ್ಮರಾರಿಶೀರ್ಷಕ್ಕೆ ವಿಭೂಷಣಾಳ್ ಸಂಸಾರಾರ್ತಿಸರ್ವಕ್ಕೆ ವಿನಾ
ಶಾರ
ಸುರಮ್ಯವಾದಾ ಶುಭವೀಚಿಸಂಖ್ಯೆಳ್ ಸಂರಕ್ಷಿಸೆನ್ನಂ ಸ್ಮೃತಿ
ಪಂಕದಿಂ ನೀಂ ! ೫೨
ಇದಂ ಪೀಯೂಷದಲೆಯಂ ಜಗನ್ನಾಥಂ ನೆಗದ್ದುದಂ ॥
ಓದುವಗಾರ್ವಗುಂ ಸತ್ಯ ಬರ್ಪುದೈ ಸುಖಸಂಪದಂ ॥ ೫೩ ॥

ಸಮಾಪ್ತ.

100. ತನ್ನ ಸೊತ್ತನ್ನೆಲ್ಲ ಸೋತನು, ಇ. 101. ಪಾರ್ವತಿ
102. ಒಳಿತು ನೋಡಲಿ.

# ಹಾರನಹಳ್ಳಿ ಅನಂತರಾಯ

## ಪುಸ್ತಕಗಳು.



೧. ದ್ವೇಷಭಾಂಡಾರ. (ನಾಟಕ).

(ಮ್ಯಾಕ್‌ಬೇಥ್ ನಾಟಕದ ಪ್ರೌಢ ಭಾಷಾಂತರವು. ವಿಶ್ವವಿದ್ಯಾಲಯದ ಪಠ್ಯಪುಸ್ತಕವು.)

ಬೆಲೆ ೧

೨. ಭೋಗಜಾಲ. (ನಾಟಕ).

(ಮನೋಹರವಾದ ಕಥೆ, ಚಮತ್ಕಾರವಾದ ಸಂವಿ ಕಾವ್ಯಮಯವೂ ಆದ ಶೈಲಿ ಮುಂತಾದವುಗಳಿಂದ ಕೂಡಿದ

ಬೆ

೩. ಕಾವ್ಯಕಲ್ಪ.

(ಜಗನ್ನಾಥ ಕವಿಯ ಗಂಗಾಲಹರಿಯ ಸಮಶ್ಲೋ ವನ್ನೊಳಕೊಂಡುದು. ವಿಪುಲವಾಗಿ ಟೀಕೆ ಟಿಪ್ಪಣಿಗಳು

ಬೆ

೪. ಲೋಕಸಂಗ್ರಹ ಅಥವಾ ಬಕಾಸುರ

(ಪೌರಾಣಿಕ ಕಥೆಯ ಸಹಾಯದಿಂದ ಸಂಘಟ ತೋರಿಸುವ ನಾಟಕವು.)

---

 ದೊರೆಯುವ ಸ್ಥ

ಗ್ರಂಥಕರ್ತರು, ಕಾರವಾರ ಅಥವಾ